'ಬಂದಿದ್ದು ಬರಲಿ ಭಗವಂತನ ದಯೆ ಇರಲಿ' ಎಂಬ ತತ್ವದಲ್ಲಿ ನಂಬಿಕೆ ಇರಿಸಿದ್ದ ಪಂಢರಿಬಾಯಿಯವರು ೧೯೬೪ರಲ್ಲಿ ರಸ್ತೆ ಅಪಘಾತದಲ್ಲಿ ಒಂದು ಕೈ ಕಳೆದುಕೊಂಡರು. ಈ ಘಟನೆಯಿಂದ ಎದೆಗುಂದದೆ ತಮ್ಮ ನಟನೆಯ ಕಾಯಕವನ್ನು ಮುಂದುವರಿಸಿದ್ದು ಅವರ ಜೀವನ ಪ್ರೀತಿಗೆ ಸಾಕ್ಷಿಯಾಗಿದೆ. ಪ್ರತಿಭೆ, ಅಂತಃಕರಣ ಮತ್ತು ಹೃದಯ ಶ್ರೀಮಂತಿಕೆ ಒಬ್ಬರಲ್ಲಿಯೇ ನೆಲೆಗೊಳ್ಳುವುದು ಅಪರೂಪ. ಅಂತಹ ಅಪರೂಪದ ಕಲಾವಿದೆ ಪಂಢರಿಬಾಯಿಯವರು ೨೯-೦೧-೨೦೦೩ರಲ್ಲಿ ನಿಧನರಾದರು. ಕಲಾರಸಿಕರ ಮನಸ್ಸಿನಲ್ಲಿ ಎಂದೆಂದಿಗೂ ಅಮರರಾದರು.

–ಡಾ. ಜಯಮಾಲಾ

ಕ್ಷೇತ್ರ :– ಓದುವುದು

ಸಾಮರ್ಥ್ಯ:– ಮುದ್ರಿತ ಪಠ್ಯೇತರ ವಿಷಯಗಳನ್ನು ಓದಿ ಕೇಳಿದ ಪ್ರಶ್ನೆಗಳಿಗೆ ಉತ್ತರಿಸುವುದು.

**ಆಶಯ :**

ನಮ್ಮ ನಾಡಿನ ಮಹಿಳೆಯರಲ್ಲಿ ಅನೇಕರು ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ, ವೈಜ್ಞಾನಿಕ ಇತ್ಯಾದಿ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಅದ್ಭುತ ಸಾಧನೆಯನ್ನು ಮಾಡಿದ್ದಾರೆ. ಬಡತನವನ್ನು ಲೆಕ್ಕಿಸದೆ ಬದುಕಿನ ಸವಾಲುಗಳನ್ನು ಎದುರಿಸಿ ಯಶಸ್ಸಿನ ಉತ್ತುಂಗಕ್ಕೇರಿದ ಮಹಿಳೆಯರನೇಕರು ನಮ್ಮ ನಡುವೆ ಇದ್ದಾರೆ. ಧೈರ್ಯ, ತಾಳ್ಮೆ, ತ್ಯಾಗಮನೋಭಾವಗಳು ಅವರನ್ನು ನಾಡು ಗುರುತಿಸುವಂತೆ ಮಾಡಿವೆ. ಅಂಥವರಲ್ಲೊಬ್ಬರನ್ನು ಕುರಿತು ಅಧ್ಯಯಿಸಿ ಅವರಿಂದ ಸ್ಫೂರ್ತಿ ಪಡೆಯುವುದು ಸಾಧ್ಯವಾಗಬೇಕು.



**ಲೇಖಕರ ಪರಿಚಯ :**



ಹೆಸರಾಂತ ಚಲನಚಿತ್ರ ನಟಿ ಡಾ. ಜಯಮಾಲಾರವರು ದಕ್ಷಿಣ ಕನ್ನಡ ಜಿಲ್ಲೆಯ ಪಣಂಬೂರಿನಲ್ಲಿ ೨೮-೦೨-೧೯೫೯ರಲ್ಲಿ ಜನಿಸಿದರು. "ಕರ್ನಾಟಕ ರಾಜ್ಯ ನಿರಾಶ್ರಿತ ಮಹಿಳೆಯರ ಪುನರ್ವಸತಿ-ಆಡಳಿತ ವ್ಯವಸ್ಥೆಯ ಒಂದು ಅಧ್ಯಯನ" ಈ ವಿಷಯದಡಿಯಲ್ಲಿ ಪಿಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ. ನಾಯಕಿಯಾಗಿ ಹಲವಾರು ಚಿತ್ರಗಳಲ್ಲಿ ನಟಿಸಿದ್ದಾರೆ, ಕರ್ನಾಟಕ ರಾಜ್ಯ ಚಲನ ಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷರಾಗಿ, ರಾಜ್ಯ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿಯ ಅಧ್ಯಕ್ಷರಾಗಿ, ಕೇಂದ್ರ ಸರ್ಕಾರ ಚಲನ ಚಿತ್ರ ಆಯ್ಕೆ ಸಮಿತಿಯ ಸದಸ್ಯರಾಗಿ- ಹೀಗೆ ವಿವಿಧ ವಲಯಗಳಲ್ಲಿ ಕರ್ತವ್ಯ ನಿರ್ವಹಿಸಿದ್ದಾರೆ. ಅವರೇ ನಿರ್ಮಿಸಿ, ನಟಿಸಿದ 'ತಾಯಿ ಸಾಹೇಬ' ಚಿತ್ರಕ್ಕೆ 'ಸ್ವರ್ಣಕಮಲ' ಪ್ರಶಸ್ತಿ, ಅಭಿನಯಕ್ಕೆ ವಿಶೇಷ ರಾಷ್ಟ್ರ ಪ್ರಶಸ್ತಿ, ಅತ್ಯುತ್ತಮ ನಟಿ, ಅತ್ಯುತ್ತಮ ಚಿತ್ರ, ಫಿಲಂಫೇರ್ ಪ್ರಶಸ್ತಿ ಹೀಗೆ ಹಲವಾರು ಪ್ರಶಸ್ತಿಗಳು ಲಭಿಸಿವೆ. ಇದಲ್ಲದೆ ರಾಜೀವ್ ಗಾಂಧಿ ರಾಷ್ಟ್ರೀಯ ಸೌಹಾರ್ದ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ವಿ.ಶಾಂತಾರಾಂ ಬಂಗಾರದ ಪದಕ, ಗ್ಲೋಬಲ್ ಮ್ಯಾನ್ ಪ್ರಶಸ್ತಿ- ಹೀಗೆ ಹತ್ತು ಹಲವು ಪ್ರಶಸ್ತಿಗಳನ್ನು ತಮ್ಮ ಮುಡಿಗೇರಿಸಿಕೊಂಡಿದ್ದಾರೆ.

ಪ್ರಸ್ತುತ ಪಾಠವು ಡಾ. ಜಯಮಾಲಾರವರು ಬರೆದಿರುವ 'ಪಂಢರಿಬಾಯಿ' ಕೃತಿಯ ಸಂಕ್ಷಿಪ್ತ ರೂಪವಾಗಿದೆ.

**ಅರ್ಥ ತಿಳಿಯಿರಿ :**

ಉತ್ತುಂಗ–ಎತ್ತರವಾದ, ಶ್ರೇಷ್ಠವಾದ. ಗಾಢ–ಹೆಚ್ಚಾದ, ದಟ್ಟವಾದ. ದುಡಿಮೆ–ಕೆಲಸ, ಸಂಪಾದನೆ. ಮಾನವೀಯತೆ–ಮನುಷ್ಯತ್ವ, ಮನುಷ್ಯ ಧರ್ಮ. ಶ್ರದ್ಧೆ– ನಿಷ್ಠೆ, ನಂಬಿಕೆ. ಹರಿದಾಸರು–ವಿಷ್ಣು ಭಕ್ತರು. ಪೋಷಣೆ–ರಕ್ಷಣೆ, ಪಾಲನೆ. ಹೊಣೆ–ಜವಾಬ್ದಾರಿ. ಸಮ್ಮುಖ–ಎದುರುಗಡೆ, ಮುಂಭಾಗ. ಒಪ್ಪಂದ–ಒಪ್ಪಿಗೆ, ಕರಾರು. ಪರವಶ–ಮೈ ಮರೆವು. ಲೀಲಾಜಾಲ–ಅತ್ಯಂತ ಸುಲಭವಾದುದು. ಮಾನಸ–ಮನುಷ್ಯ, ಮನಸ್ಸು. ಋಣ–ಸಾಲ, ಹಂಗು. ಅನಿವಾರ್ಯ–ಅವಶ್ಯ. ಉದಾರಿ–ಧಾರಾಳಿ. ಮೇರುನಟ– ಅತ್ಯಂತ ಶ್ರೇಷ್ಠ ನಟ. ಎದೆಗುಂದದೆ–ಧೈರ್ಯಗೆಡದೆ. ಅಂತಃಕರಣ–ಮನಸ್ಸು, ದಯೆ. ಅಮರ–ಸಾವಿಲ್ಲದ, ಮರಣವಿಲ್ಲದ, ಶಾಶ್ವತ.

**ವಿವರ ತಿಳಿಯಿರಿ :**

**ಹರಿದಾಸ :** ವಿಷ್ಣುವಿನ ಭಕ್ತರು ಎಂದು ಗುರುತಿಸಲ್ಪಟ್ಟವರು. ಪದ್ಯಗದ್ಯಮಿಶ್ರಿತವಾಗಿ ಹರಿಯ ಕಥೆಯನ್ನು ಹೇಳುತ್ತ ಊರಿಂದೂರಿಗೆ ಸಾಗುವವರು.

**ಹರಿಕಥೆ :** ವಿಷ್ಣು ಹಾಗೂ ಆತನ ಅವತಾರಗಳಿಗೆ ಸಂಬಂಧಪಟ್ಟ ಕತೆ.

**ಕೀರ್ತನೆ :** ದೇವರ ಸ್ತುತಿ ರೂಪವಾದ ಹಾಡು.

**ಪ್ರವರ್ತಕ :** ಯಾವುದೇ ಕೆಲಸದಲ್ಲಿ ತೊಡಗಲು ಪ್ರೇರೇಪಿಸುವವರು, ಮೂಲ ಕಾರಣಕರ್ತ.

**ತುತ್ತಿನ ಚೀಲ :** ಆಹಾರ ಪದಾರ್ಥಗಳನ್ನು ತುಂಬಿಸುವ ಚೀಲ, ಹೊಟ್ಟೆ.

**ಕಟು ಸಂಪ್ರದಾಯವಾದಿ :** ಸಂಪ್ರದಾಯಗಳನ್ನು ಬಲವಾಗಿ ನಂಬಿಕೊಂಡು ಅಂತೆಯೇ ಬದುಕುವವರು.

**ಯಶೋಗಾಥೆ :** ಯಶಸ್ಸಿನ ಕಥೆ.

**ಪರಕಾಯ ಪ್ರವೇಶ :** ಅಲೌಕಿಕ ಸಾಧನೆಯಿಂದ ತನ್ನ ಪ್ರಾಣವನ್ನು ಬೇರೊಂದು ಶರೀರದಲ್ಲಿ ಪ್ರವೇಶಿಸುವಂತೆ ಮಾಡುವುದು.



## ವ್ಯಾಕರಣ ಮಾಹಿತಿ

**ಸರ್ವನಾಮಗಳು :**

**ಕೆಳಗಿನ ವಾಕ್ಯಗಳನ್ನು ಗಮನಿಸಿ ಓದಿರಿ**

ಪುಟ್ಟಿಗೆ ರೆಕ್ಕೆಗಳು ಬಂದವು; ಅವಳು ಮೇಲಕ್ಕೆ ಹಾರಿದಳು.

ಶಂತನು ಒಬ್ಬ ರಾಜ; ಆತನು ಬೇಟೆಗಾಗಿ ಕಾಡಿಗೆ ಹೋಗುತ್ತಿದ್ದನು.

ಮೇಲಿನ ವಾಕ್ಯಗಳಲ್ಲಿ ಅಡಿಗೆರೆ ಎಳೆದ ಪದಗಳನ್ನು ಗಮನಿಸಿರಿ. ಮೊದಲನೆಯ ವಾಕ್ಯದಲ್ಲಿ 'ಅವಳು' ಎಂಬ ಪದವು 'ಪುಟ್ಟಿ' ಎಂಬ ಪದಕ್ಕೆ ಬದಲಾಗಿ ಬಳಕೆಯಾಗಿದೆ. ಎರಡನೆಯ ವಾಕ್ಯದಲ್ಲಿ 'ಆತನು' ಎಂಬ ಪದವು 'ಶಂತನು' ಎಂಬ ಪದಕ್ಕೆ ಬದಲಾಗಿ ಬಳಕೆಯಾಗಿದೆ. ಪುಟ್ಟಿ ಮತ್ತು ಶಂತನು ಎಂಬುವು ನಾಮಪದಗಳಾಗಿವೆ. 'ಅವಳು', 'ಆತನು' ಎಂಬ ಪದಗಳು ನಾಮಪದಗಳ ಬದಲಿಗೆ ಬಳಕೆಯಾಗಿವೆ. ಹೀಗೆ ನಾಮಪದಗಳ ಬದಲಾಗಿ ಬಳಸುವ ಪದಗಳು 'ಸರ್ವನಾಮಗಳು.'

ಅದು, ಇದು, ಅವಳು, ಇವನು, ನಾನು, ನೀನು, ನೀವು, ನಾವು, ತಾವು, ಅವರು, ಇವರು ಇತ್ಯಾದಿಗಳು ಸರ್ವನಾಮಗಳಾಗಿವೆ. ನಾಮಪದಗಳನ್ನು ಪದೇಪದೇ ಬಳಸುವುದರ ಬದಲಿಗೆ ಇವುಗಳನ್ನು ಬಳಸುತ್ತಾರೆ.

ಇನ್ನೂ ಕೆಲವು ಉದಾಹರಣೆಗಳನ್ನು ಗಮನಿಸೋಣ

- ಗುರುಗಳು ಶಾಲೆಗೆ ಹೊರಟರು. ಅವರು ಕೈಯಲ್ಲಿ ಪುಸ್ತಕ ಹಿಡಿದಿದ್ದರು.
- ಮೋತಿ ಜಾನ್ಸನ್‌ನ ನಾಯಿ. ಅದು ಆತನಿಗೆ ಬಲು ಪ್ರಿಯ.
- ಯಾಸ್ಮಿನ್ ಮತ್ತು ಉನ್ನತಿ ಇಬ್ಬರು ಗೆಳತಿಯರು. ಇವರು ಒಮ್ಮೆ ಪ್ರವಾಸ ಹೊರಟರು.

ಮೇಲಿನ ವಾಕ್ಯಗಳಲ್ಲಿ ಅವರು, ಅದು, ಇವರು, ಎಂಬ ಪದಗಳು ನಾಮಪದದ ಬದಲಾಗಿ ಅದರ ಸ್ಥಾನದಲ್ಲಿದ್ದು ನಾಮಪದವನ್ನು ಸೂಚಿಸುತ್ತವೆ. ಇಂತಹವುಗಳನ್ನು ಸರ್ವನಾಮಗಳು ಎನ್ನುತ್ತಾರೆ.

## ಅಭ್ಯಾಸಗಳು

### ಅ. ಬಿಟ್ಟ ಪದ ತುಂಬಿರಿ.

೧. ಪಂಢರಿಬಾಯಿ ಎಂದರೆ ತಟ್ಟನೆ ನೆನಪಾಗುವುದು ..........................................ತುಂಬಿದ ತಾಯಿಯ ಮುಖ.

೨. ಮಹಾರಾಜರ ಆಳ್ವಿಕೆಯ ಕಾಲದಲ್ಲಿ ಮೈಸೂರು...............................ಪ್ರೋತ್ಸಾಹ ನೀಡುವ ಕೇಂದ್ರವಾಗಿತ್ತು.

೩. ಗುಣಸಾಗರಿ ಸಿನಿಮಾದಲ್ಲಿ ..............................ಅವರಿಗೆ ನಾಯಕಿಯಾಗಿ ನಟಿಸಿದರು.

೪. ಪಂಢರಿಬಾಯಿಯವರ ..................................ನಟನೆಗೆ, ತನ್ಮಯತೆಗೆ ಅವರೆ ಸಾಟಿ.

೫. ತಮಿಳುನಾಡು ಸರ್ಕಾರ ಪಂಢರಿಬಾಯಿಯವರಿಗೆ ...............................ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು.



### ಆ. ಪದಗಳಿಗೆ ವಿರುದ್ಧಾರ್ಥಕ ಪದ ಬರೆಯಿರಿ.

೧. ಸಾಮಾನ್ಯ   ೨. ಅಭ್ಯಾಸ   ೩. ಶಿಸ್ತು   ೪. ಸಂದೇಹ

### ಇ. ಕೆಳಗಿನ ಪದಗಳನ್ನು ಬಳಸಿ ಸ್ವಂತ ವಾಕ್ಯ ರಚಿಸಿರಿ.

೧. ಉತ್ತುಂಗ   ೨. ಮಾನವೀಯತೆ   ೩. ಪ್ರತಿಭೆ   ೪. ಲೀಲಾಜಾಲ   ೫. ಪರವಶ

### ಈ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ಪಂಢರಿಬಾಯಿ ಅವರ ತಂದೆ ತಾಯಿಯರ ಹೆಸರೇನು?

೨. ಪಂಢರಿಬಾಯಿಯವರು ನಟಿಸಿದ ಮೊದಲ ಚಿತ್ರದ ಹೆಸರೇನು?

೩. ಪಂಢರಿಬಾಯಿ ನಾಟಕ ರಂಗಕ್ಕೆ ಪ್ರವೇಶಿಸಬೇಕಾಗಿ ಬಂದದ್ದು ಯಾಕೆ?

೪. ಪಂಢರಿಬಾಯಿ ಅವರಿಗೆ ಜೀವಮಾನ ಸಾಧನೆಗಾಗಿ ಯಾವ ಪ್ರಶಸ್ತಿಯನ್ನು ನೀಡಲಾಗಿದೆ?

೫. ಪಂಢರಿಬಾಯಿಯವರು ಯಾರ ಮನಸ್ಸಿನಲ್ಲಿ ಅಮರರಾದರು?

### ಉ. ಕೆಳಗಿನ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಪಂಢರಿಬಾಯಿಯವರು ನಾಟಕದಲ್ಲಿ ಬಣ್ಣ ಹಚ್ಚಲು ಕಾರಣವೇನು?

೨. ರಂಗರಾವ್ ಅವರು ಮಗಳ ಹೆಸರನ್ನು ಪಂಢರಿಬಾಯಿ ಎಂದು ಬದಲಾಯಿಸಲು ಕಾರಣವೇನು?

೩. ಪಂಢರಿಬಾಯಿಯವರು ಕಲಾವಿದೆಯಾಗಿ ರೂಪುಗೊಳ್ಳಲು ಸಹಕರಿಸಿದ ಅಂಶಗಳು ಯಾವುವು?

೪. ಪಂಢರಿಬಾಯಿಯವರು ಮದ್ರಾಸಿಗೆ ಹೋಗಿ ನೆಲೆಸಲು ಕಾರಣವೇನು?

### ಊ. ಈ ವಾಕ್ಯಗಳಲ್ಲಿ ಅಡಿಗೆರೆ ಎಳೆದ ಪದಗಳನ್ನು ಬಿಡಿಸಿ ಬರೆಯಿರಿ.

೧. <u>ಅತ್ಯಲ್ಪ</u> ಕಾಲದಲ್ಲಿ ಶ್ರೀಮಂತನಾಗಲು ಆಸೆ ಪಡುವುದು ತಪ್ಪು.

೨. ಈಗಿನ ಕಾಲದಲ್ಲಿ ಶಿಕ್ಷಣ ಪಡೆಯದೆ <u>ಗತ್ಯಂತರ</u>ವಿಲ್ಲ.

೩. ಆಯುರ್ವೇದದಲ್ಲಿ ಹಲವು <u>ಅತ್ಯಮೂಲ್ಯ</u> ಔಷಧಿಗಳಿವೆ.

೪. <u>ಗುರ್ವಾಜ್ಞೆ</u>ಯನ್ನು ಶಿಷ್ಯರು ಪಾಲಿಸುವರು.

### ಋ. ಕೆಳಗಿನ ಪದಗಳನ್ನು ಬಿಡಿಸಿ ಸಂಧಿಯನ್ನು ಹೆಸರಿಸಿ.

೧. ಪ್ರತ್ಯುಪಕಾರ  ೨. ಜಾತ್ಯತೀತ  ೩. ಏಕೈಕ  ೪. ವನೌಷಧ  ೫. ಇತ್ಯಾದಿ

### ಯೋಜನೆ

೧. ಸಾಪ್ತಾಹಿಕ ಪುರವಣಿಯಲ್ಲಿ ಬರುವ ಮಕ್ಕಳ ಕಥೆ, ಚುಟುಕು, ಹಾಡುಗಳನ್ನು ಸಂಗ್ರಹಿಸಿರಿ.

೨. ಪಂಡರಿಬಾಯಿಯವರು ನಟಿಸಿರುವ ಚಲನಚಿತ್ರಗಳ ಹೆಸರನ್ನು ಪೋಷಕರ ಸಹಾಯದಿಂದ ಸಂಗ್ರಹಿಸಿ ಪಟ್ಟಿ ಮಾಡಿರಿ.

೩. ಇಬ್ಬರು ಚಲನಚಿತ್ರ ಕಲಾವಿದರ ಜೀವನ ಚರಿತ್ರೆಗಳನ್ನು ಸಂಗ್ರಹಿಸಿ ವರದಿ ತಯಾರಿಸಿರಿ.

### ಓದಿಗೆ ಮನ್ನಣೆ :

೧. ಪಂಢರಿಬಾಯಿಯವರು ನಟಿಸಿರುವ ಯಾವುದಾದರೂ ಚಲನಚಿತ್ರವನ್ನು ನೋಡಿರಿ.

೨. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಮಹಿಳೆಯರ ಜೀವನ ಚರಿತ್ರೆಯನ್ನು ಸಂಗ್ರಹಿಸಿ ಓದಿರಿ.

೩. ಭಾರತದ ವಿಜ್ಞಾನಿ ಹಾಗು ಮಾಜಿ ರಾಷ್ಟ್ರಪತಿಗಳಾದ ಎ.ಪಿ.ಜೆ. ಅಬ್ದುಲ್ ಕಲಾಂರವರ ಜೀವನ ಚರಿತ್ರೆಯನ್ನು ಓದಿರಿ.

### ಶುಭ ನುಡಿ :

- ಜೀವನದಲ್ಲಿ ಕಷ್ಟಪಟ್ಟರೆ ಫಲವುಂಟು.
- ಸತತ ಅಭ್ಯಾಸವೇ ಸಾಧನೆಗೆ ಹಾದಿ.
- ಮಾನವೀಯ ಗುಣಗಳೇ ಮನುಷ್ಯನ ಆಭರಣ.



# ಕೃಷ್ಣ – ಸುದಾಮ

## ದೃಶ್ಯ–೧

[ಸುದಾಮನ ಗುಡಿಸಲು, ರಾತ್ರಿಯ ಸಮಯ. ಸುದಾಮ ಯೋಚಿಸುತ್ತಾ ಶತಪದಿಸುತ್ತಿದ್ದಾನೆ. ಆತನ ಮುಖದಲ್ಲಿ ನಿರಾಸೆ ತುಂಬಿದೆ.]



**ಸುದಾಮ** : (ಸ್ವಗತ) ಜೀವನದಲ್ಲಿ ಬರೀ ಕಷ್ಟಗಳೆ ಬರುತ್ತಿವೆಯಲ್ಲ! ಸುಖದ ದಿನಗಳು ಯಾವಾಗ ಬರುತ್ತವೊ? ಹಾ! (ನಿಟ್ಟುಸಿರುಬಿಟ್ಟು) ಅದೆಲ್ಲಾ ಆ ದೇವರಿಗೇ ಗೊತ್ತು!

**ಹೆಂಡತಿ** : (ಒಳಗಿನಿಂದ ಬರುವಳು) ಬಡತನ ನಮ್ಮ ಬೆನ್ನು ಹತ್ತಿದೆ. ಅದು ನಮ್ಮನ್ನು ಬಿಟ್ಟು ಹೋಗುವುದಿಲ್ಲ.

**ಸುದಾಮ** : 'ಬಡತನ ನಮಗಿರಲಿ, ಮನೆ ತುಂಬ ಮಕ್ಕಳಿರಲಿ' ಎಂದು ದೇವರಲ್ಲಿ ನೀ ಬೇಡಿಕೊಂಡೆಯೋ ಹೇಗೆ ?

**ಹೆಂಡತಿ** : ಮಕ್ಕಳಿರಲಿ ಅಂದಿದ್ದು ನಿಜ. ಆದ್ರೆ.............

ಮಗಳು : (ಮಕ್ಕಳ ಪ್ರವೇಶ) ಅಮ್ಮಾ .... ಅಮ್ಮಾ ..... ಹಸಿವಾಗ್ತಿದೆ.

ಮಗ : ನನಗೂ ಹಸಿವು, ಊಟ ಕೊಡಮ್ಮ.

ಹೆಂಡತಿ : ನೋಡಿದ್ರಾ, ಮಕ್ಕಳೆಲ್ಲಾ ಹಸಿವಿನಿಂದ ಕಂಗಾಲಾಗಿವೆ. ಪಾಂಡಿತ್ಯವುಳ್ಳ ನನ್ನ ಗಂಡ ದುಡಿದು ತರ್ತಾರೇಂತ ತಿಳಿದಿದ್ದೆ.

ಸುದಾಮ : ಯಾವುದಕ್ಕೂ ಕಾಲ ಕೂಡಿ ಬರಬೇಕಲ್ಲ.

ಹೆಂಡತಿ : ಅಂತೂ ಇಂತೂ ನಮಗೆ ಬಡತನವೆ ಗತಿ.

ಸುದಾಮ : ಚಿಂತೆ ಮಾಡಿದರೆ ಏನು ಬಂತು? ಜೀವನದಲ್ಲಿ ಬಂದದ್ದನ್ನು ಅನುಭವಿಸಲೇ ಬೇಕು. ಅದೇ ಮಾನವ ಧರ್ಮ.

ಹೆಂಡತಿ : ನೀವು ನೀತಿ ಹೇಳುವುದರಲ್ಲಿ ಬಹಳ ಮುಂದು.

ಸುದಾಮ : ನೀತಿ, ನಿಯಮ, ವಿಧೇಯತೆ, ಪಾಂಡಿತ್ಯ ಇದ್ದುದರಿಂದಲೇ ಗುರುಕುಲದಲ್ಲಿ ಶ್ರೀಕೃಷ್ಣ ನನ್ನ ಸ್ನೇಹಿತನಾದದ್ದು.

ಹೆಂಡತಿ : ಮಾತುಮಾತಿಗೂ "ಶ್ರೀಕೃಷ್ಣ ನನ್ನ ಸ್ನೇಹಿತನಾಗಿದ್ದ" ಅಂತೀರಿ.

ಸುದಾಮ : ಹೂಂ! ನಿಜಕ್ಕೂ ಆತ ನನ್ನ ಪರಮ ಮಿತ್ರನಾಗಿದ್ದ. ಗುರುಕುಲದಲ್ಲಿ ಒಟ್ಟಿಗೆ ವಿದ್ಯಾಭ್ಯಾಸ ಮಾಡಿದ್ದೆವು.

ಹೆಂಡತಿ : ಸತ್ಯ ಹೇಳುವಿರಾ! ಆ ಶ್ರೀಮಂತರೆಲ್ಲಿ, ನೀವೆಲ್ಲಿ? ಯಾಕೆ ಸುಮ್ಮನೆ ಬಡಾಯಿ ಬಿಡ್ತೀರಾ?

ಸುದಾಮ : ಯಾಕೆ ಸುಳ್ಳು ಹೇಳಲಿ ನಾನು, ಕೃಷ್ಣ ಸದಾ ನನ್ನ ಜೊತೆಯಲ್ಲಿಯೇ ಇರುತ್ತಿದ್ದ. ಒಟ್ಟಿಗೆ ಕಲಿಯುತ್ತಿದ್ದೆವು. ನನ್ನನ್ನು ಕಂಡರೆ ಅವನಿಗೆ ಅಪಾರ ಪ್ರೀತಿ, ಸ್ನೇಹ, ಗೌರವ.

ಹೆಂಡತಿ : ಅಂತಹ ಶ್ರೀಮಂತ ಸ್ನೇಹಿತನಿದ್ದರೂ ಇಲ್ಲಿಯವರೆಗೆ ನೀವು ಏಕೆ ಅವರ ಹತ್ತಿರ ಸಹಾಯ ಕೇಳಲಿಲ್ಲ?

ಸುದಾಮ : (ಕ್ಷಣ ಹೊತ್ತು ಮೌನ) ಬಡವನಾದವ ದೊಡ್ಡವರ ಮನೆಗೆ ಸಹಾಯ ಕೇಳಲು ಹೋಗಬಾರದು.

ಹೆಂಡತಿ : ಸ್ನೇಹಿತರೆದುರು ಎಂಥ ಸ್ವಾಭಿಮಾನ ! ದಯವಿಟ್ಟು ಹೋಗಿ ಅವರಲ್ಲಿ ಸಹಾಯ ಕೇಳಿ.

ಸುದಾಮ : ಹೇಗೆ ಕೇಳುವುದು?

ಹೆಂಡತಿ : ಆತ್ಮೀಯ ಗೆಳೆಯ ಅನ್ನುತ್ತೀರಿ, ಅಂದ ಮೇಲೆ ಅವರು ಸಹಾಯ ಮಾಡೇ ಮಾಡುತ್ತಾರೆ.

ಸುದಾಮ : ಇಲ್ಲ ಅನ್ನಲಾರ, ಆದರೂ ಕೇಳುವುದಕ್ಕೆ ಸಂಕೋಚ.

ಹೆಂಡತಿ : ಸಂಕೋಚ ಬೇಡಾರೀ, ಹಸಿದಿರುವ ಮಕ್ಕಳಿಗೋಸ್ಕರವಾದರೂ ಹೋಗಿ ಕೇಳಿ.

ಸುದಾಮ : ಆಗಲಿ, ಹೋಗುತ್ತೇನೆ. ಆದರೆ ಗೆಳೆಯನನ್ನು ನೋಡಲು ಬರಿಗೈಯಲ್ಲಿ ಹೋಗಲಾ?

ಹೆಂಡತಿ : ನೀನ್ನೆ ತಂದ ಅವಲಕ್ಕಿಯಲ್ಲಿ ಸ್ವಲ್ಪವೇ ಉಳಿದಿದೆ. ಮಕ್ಕಳ ಉಪಾಹಾರಕ್ಕೆ ಏನೇನೂ ಸಾಲದು. ಅದನ್ನೇ ಕಟ್ಟಿಕೊಡಲೆ?

ಮಗ : ಹಸಿವು, ಅದನ್ನಾದರೂ ನನಗೆ ಕೊಡಮ್ಮ.

ಹೆಂಡತಿ : ತುಸು ತಡೆದುಕೋ ಕಂದಾ, ದೇವರ ದಯೆಯಿದ್ದರೆ ಈ ಅವಲಕ್ಕಿಯೇ ಬಂಗಾರವಾದೀತು (ಗಂಡನಿಗೆ) ಕಟ್ಟಿಕೊಡಲೆ?

ಸುದಾಮ : ಸರಿ, ಹಾಗೆ ಮಾಡು.

## ದೃಶ್ಯ –೨

[ಕೃಷ್ಣನ ಅರಮನೆ– ಕಾವಲುಗಾರ ಸುದಾಮನನ್ನು ಅರಮನೆಯೊಳಕ್ಕೆ ಬಿಡದೆ ಬಾಗಿಲಲ್ಲಿ ನಿಲ್ಲಿಸುವನು. ಕೃಷ್ಣ ಆಕಸ್ಮಿಕವಾಗಿ ಹೊರಗೆ ಬರುವನು. ಸುದಾಮನನ್ನು ನೋಡುವನು.]

ಕೃಷ್ಣ : (ಆಶ್ಚರ್ಯದಿಂದ) ಓಹೋ ಸುದಾಮ! ಯಾವಾಗ ಬಂದೆ? ಬಾ ಒಳಗೆ (ಸುದಾಮನ ಕೈ ಹಿಡಿಯುವನು. ಕಾವಲುಗಾರ ಆಶ್ಚರ್ಯದಿಂದ ದೂರ ಸರಿಯುವನು.)

ಸುದಾಮ : ಶ್ರೀಕೃಷ್ಣ ಮಹಾರಾಜರು! (ಅತೀವ ಸಂತೋಷದಿಂದ ಆನಂದಬಾಷ್ಪ ಸುರಿಯುತ್ತದೆ. ಮಾತೇ ಹೊರಡದಂತಾಗಿದೆ.)

ಕೃಷ್ಣ : ಏಕೆ ಸುದಾಮ ಕಣ್ಣಲ್ಲಿ ನೀರು?

ಸುದಾಮ : ಬಹಳ ದಿನಗಳ ಅನಂತರ ನಿಮ್ಮನ್ನು ನೋಡುತ್ತಿರುವೆನಲ್ಲ! ಅದಕ್ಕಾಗಿ ಆನಂದದ ಕಣ್ಣೀರು.

ಕೃಷ್ಣ : ದೂರದಿಂದ ದಣಿದು ಬಂದಿದ್ದೀಯ. ಸ್ನಾನ ಮುಗಿಸಿ ಊಟ ಮಾಡಿ ವಿಶ್ರಾಂತಿ ತೆಗೆದುಕೋ. ಅಷ್ಟುಬೇಗ ನಿನ್ನನ್ನು ಹೋಗಗೊಡುವುದಿಲ್ಲ.

ಸುದಾಮ : ಅಯ್ಯೋ, ಅಲ್ಲಿ ಮನೆಯಲ್ಲಿ ಯಾರೂ ಇಲ್ಲ. ಮಕ್ಕಳಿಗೆ........

ಕೃಷ್ಣ : ಸುಮ್ಮನಿರು, ಬಂದ ತಕ್ಷಣ ಹೋಗಬೇಕಿದ್ದರೆ ಯಾಕೆ ಬಂದೆ? ಯಾರಲ್ಲಿ? ಸುದಾಮನಿಗೆ ವಿಶ್ರಾಂತಿಯ ವ್ಯವಸ್ಥೆ ಮಾಡಿ. (ಸುದಾಮನಿಗೆ) ನನಗೂ ತುರ್ತು ಕೆಲಸವಿದೆ. ಅದು ಮುಗಿದ ತಕ್ಷಣ ಬಂದು ಬಿಡುವೆ.

## ದೃಶ್ಯ–೩

( ಕೃಷ್ಣನ ಅರಮನೆ– ಸುದಾಮನಿರುವ ಕೋಣೆ. ತೆರೆ ಸರಿದಾಗ.)

ಸುದಾಮ : (ಸ್ವಗತ) ಶ್ರೀಕೃಷ್ಣನಂತಹ ಮಿತ್ರನನ್ನು ಪಡೆದ ನಾನೇ ಧನ್ಯನು, ನನ್ನನ್ನು ಮರೆತಿಲ್ಲ. ನಾನು ತಂದ ಅವಲಕ್ಕಿಯನ್ನು ತಾನೂ ತಿಂದು ಹೆಂಡತಿಗೂ ಪ್ರೀತಿಯಿಂದ ತಿನ್ನಿಸಿದ. ಇಷ್ಟೊಂದು ಪ್ರೀತಿ ವಿಶ್ವಾಸವಿರುವ ಕೃಷ್ಣನ ಹತ್ತಿರ ನನ್ನ ಬಡತನ ಹೇಳಿ ಆತನ ಮನಸ್ಸಿಗೆ ಬೇಸರವುಂಟುಮಾಡಬಾರದು. ನನ್ನ ಬಡತನ ನನಗಿರಲಿ.

**ಕೃಷ್ಣ** : (ಹಿಂದಿನಿಂದ ಬರುತ್ತ) ಏನು ಯೋಚಿಸುತ್ತಿರುವೆ ಸುದಾಮ?

**ಸುದಾಮ** : ಏನಿಲ್ಲ ಕೃಷ್ಣ ..... ಏನಿಲ್ಲ, ಸುಮ್ಮನೆ.

**ಕೃಷ್ಣ** : ನೀ ಬಂದು ನನ್ನ ಮನಸ್ಸಿಗೆ ತುಂಬಾ ಸಂತೋಷವನ್ನುಂಟು ಮಾಡಿದೆ. ನನಗೆ ಗುರುಕುಲದ ಜೀವನ ನೆನಪಾಗುತ್ತಿದೆ.





**ಸುದಾಮ** : ಒಟ್ಟಿಗೆ ಊಟ ಮಾಡುತ್ತಿದ್ದೆವು, ಕೂಡಿ ಕಲಿಯುತ್ತಿದ್ದೆವು, ಕಟ್ಟಿಗೆ ತರಲು ಹೋಗುತ್ತಿದ್ದೆವು.

**ಕೃಷ್ಣ** : ಗುರುಮಾತೆ ಕೊಟ್ಟ ಹುರಿದ ಕಡಲೆ ತಿಂದಿದ್ದು! ನಿನ್ನ ಪಾಲಿನ ಕಡಲೆ ನಾ ಕಸಿದುಕೊಂಡಿದ್ದು!

**ಸುದಾಮ** : (ತಡವರಿಸುತ್ತಾ) ಹಸಿವು......ಬಡತನ.....(ಏನೋ ನೆನಪು ಮಾಡಿಕೊಳ್ಳಲು ಯತ್ನಿಸಿ ಮೌನಿಯಾಗುವನು.)

**ಕೃಷ್ಣ** : ಪ್ರಜೆಗಳ ಹಸಿವು ಹಿಂಗಿಸಲು ಅವರ ಕಷ್ಟ ಕಾರ್ಪಣ್ಯ ನೀಗಿಸಲು ರಾಜನಾದವನು ಶ್ರಮಿಸಬೇಕು. ಆಗ ಮಾತ್ರ ಅವನು ನಿಜವಾದ ರಾಜನಾಗುವನು. ನಿನ್ನನ್ನು ಪೀಡಿಸಿದ್ದು ತಪ್ಪೆಂದು ಕ್ರಮೇಣ ನನ್ನ ಅರಿವಿಗೆ ಬಂತು ನೋಡು.

**ಸುದಾಮ** : ಕೃಷ್ಣ, ಇಷ್ಟು ದಿನ ಇಲ್ಲಿದ್ದು ಅದನ್ನೆಲ್ಲ ಕಣ್ಣಾರೆ ಕಂಡಿರುವೆ.

**ಕೃಷ್ಣ** : ಸುದಾಮ, ನಿನಗೇನು ಬೇಕು?

ಸುದಾಮ : ನನಗೇನೂ ಬೇಡ. ನಿನ್ನ ಸತ್ಕಾರ ಜೀವನದಲ್ಲಿ ಮರೆಯುವಂತಿಲ್ಲ. ನಿನ್ನ ಸ್ನೇಹವೊಂದೆ ಸಾಕು. ಇನ್ನು ನನ್ನೂರಿಗೆ ಹೊರಡುವೆ.

ಕೃಷ್ಣ : ಇಷ್ಟು ಬೇಗ !

ಸುದಾಮ : ನಾನು ಇಷ್ಟು ದೀರ್ಘಕಾಲ ಮನೆಬಿಟ್ಟು ಇದ್ದವನೆ ಅಲ್ಲ. ಅಲ್ಲಿ ಹೆಂಡತಿ ಮಕ್ಕಳು ನನ್ನ ದಾರಿ ಕಾದು ಕಂಗಾಲಾಗಿರಬಹುದು.

ಕೃಷ್ಣ : ಇಲ್ಲಿಗೆ ಬಂದ ವಿಷಯ ಅವರಿಗೆ ಗೊತ್ತಿದೆಯಲ್ಲ.

ಸುದಾಮ : ಗೊತ್ತಿದೆ. ಆದರೆ ನನಗೆ ಮಕ್ಕಳದೇ ಚಿಂತೆ. ಹೊರಡಲು ಅಪ್ಪಣೆ ಕೊಡು ಕೃಷ್ಣಾ.

ಕೃಷ್ಣ : ನಿನ್ನ ಇಷ್ಟದಂತೆಯೇ ಆಗಲಿ, ಹೋಗಿ ಬಾ. ಶುಭವಾಗಲಿ ಗೆಳೆಯ. ಅಂದ ಹಾಗೆ ನಿನ್ನ ಮನೆಗೆ ನನ್ನನ್ನು ಕರೆಯಲೇ ಇಲ್ಲ! ಪರವಾಗಿಲ್ಲ. ನೀನು ಕರೆಯದಿದ್ದರೂ ನಾನೇ ಬರುವೆ.

ಸುದಾಮ : ಅಯ್ಯೋ! ನನ್ನ ಮನೆಗೆ ! ಬೇಡ ಕೃಷ್ಣಾ !

ಕೃಷ್ಣ : ಈಗ ಚಿಂತೆ ಬಿಟ್ಟು ಹೊರಡು. ಒಳ್ಳೆಯದಾಗಲಿ.

## ದೃಶ್ಯ-೪

[ಸುದಾಮನ ಸುಂದರವಾದ ಮನೆ. ದೂರದಲ್ಲಿ ಮರಗಳು. ಹೆಂಡತಿ, ಮಕ್ಕಳು ಹೊಸಬಟ್ಟೆ ಧರಿಸಿ ಮನೆಯಲ್ಲಿ ಸಂತೋಷದಿಂದ ಇರುವ ಸನ್ನಿವೇಶ.]

ಸುದಾಮ : ( ಆಶ್ಚರ್ಯದಿಂದ ಹೆಂಡತಿಗೆ ) ನೀವು ಯಾರ ಮನೆಯಲ್ಲಿದ್ದೀರಿ?

ಹೆಂಡತಿ : ಇದು ನಮ್ಮ ಮನೆ ಕಣ್ರೀ-

ಸುದಾಮ : ನಮ್ಮ ಗುಡಿಸಲು ಎಲ್ಲಿ?

ಹೆಂಡತಿ : ಆ ಗುಡಿಸಲಿನ ಜಾಗದಲ್ಲಿಯೇ ಈ ಅರಮನೆಯಂತಹ ಮನೆ ನಿರ್ಮಾಣವಾಗಿದೆ.

ಸುದಾಮ : ಅರೆ! ನಾನು ಹೋಗಿ ಬರುವುದರೊಳಗೆ ಇದು ಹೇಗೆ ಸಾಧ್ಯವಾಯ್ತು?

ಹೆಂಡತಿ : (ನಗುತ್ತ) ನಿಮ್ಮ ಮಿತ್ರನ ಕೃಪೆಯಿಂದ.

ಸುದಾಮ : (ಆಶ್ಚರ್ಯದಿಂದ) ನನ್ನ ಮಿತ್ರ ಶ್ರೀಕೃಷ್ಣನಿಂದ!

ಹೆಂಡತಿ : ಹೌದು, ಆ ಮಹಾರಾಯ ಶ್ರೀಕೃಷ್ಣನಿಂದಲೇ.

ಸುದಾಮ : ನಾನು ಅವನಿಗೆ ಸಹಾಯ ಮಾಡು ಎಂದು ಕೇಳಿಯೇ ಇಲ್ಲ.

ಹೆಂಡತಿ : ನಿಜವಾಗಿಯೂ!

ಸುದಾಮ : ಸತ್ಯವಾಗಿಯೂ.



**ಹೆಂಡತಿ** : ನೀವು ದ್ವಾರಕಾ ನಗರ ತಲುಪಿದ ದಿನವೇ ಅಲ್ಲಿಂದ ಸೇವಕರ ದಂಡು ಬಂತು. ಬೇಕಾದ ಎಲ್ಲ ವಸ್ತುಗಳನ್ನು ತಂದರು. ಚಕಚಕಾಂತ ಮನೆ ನಿರ್ಮಿಸಿದರು. ನಮಗೆಲ್ಲ ಹೊಸ ಉಡುಪು, ಆಭರಣಗಳನ್ನು ಸಹ ಕೊಟ್ಟರು.

**ಸುದಾಮ** : ಪರಮಾಶ್ಚರ್ಯ, ನನ್ನ ಮನದ ಇಂಗಿತವನ್ನು ತಿಳಿದುಕೊಂಡು ಎಲ್ಲಾ ರೀತಿಯ ಸಹಾಯ ಮಾಡಿದ್ದಾನೆ ಶ್ರೀಕೃಷ್ಣ.

**ಹೆಂಡತಿ** : ನೀವು ತೆಗೆದುಕೊಂಡು ಹೋದ ಅವಲಕ್ಕಿಯನ್ನು ಅವರಿಗೆ ನೀಡಿದಿರಾ?

**ಸುದಾಮ** : ಹೂಂ! ಕೊಟ್ಟೆ. ಬಹಳ ಆನಂದದಿಂದ ತಿಂದು, ಹೆಂಡತಿ ರುಕ್ಮಿಣಿಗೂ ತಿನ್ನಿಸಿದ.

**ಹೆಂಡತಿ** : ಅಬ್ಬಾ........! ಬಡವರ ಮನೆ ಅವಲಕ್ಕಿಯನ್ನು ಸಂತೋಷವಾಗಿ ತಿಂದರಲ್ಲ. ಇದು ಅವರ ನಿಜವಾದ ಸ್ನೇಹ ಹಾಗೂ ದೊಡ್ಡ ಗುಣ. ಮತ್ತೆ ನೀವು ಯಾಕೆ ಸಹಾಯ ಕೇಳಲಿಲ್ಲ?

**ಸುದಾಮ** : ಆತ ಸತ್ಕಾರ ಮಾಡಿದ್ದು ನೋಡಿ ನನ್ನ ಮನಸ್ಸು ನಾಚಿ ಕುಗ್ಗಿ ಹೋಯಿತು. ಮತ್ತೆ ಏನನ್ನು ಕೇಳಲೂ ಮನಸ್ಸಾಗಲಿಲ್ಲ.

**ಹೆಂಡತಿ** : ನೀವು ಕೇಳಲಿಲ್ಲ ನಿಜ, ಆದರೆ ಆ ಶ್ರೀಕೃಷ್ಣ ಪರಮಾತ್ಮನೇ ತಮ್ಮ ಕರ್ತವ್ಯ ಮಾಡಿದ್ದಾರೆ.

**ಸುದಾಮ** : ಮಕ್ಕಳೆಲ್ಲಾ ಎಲ್ಲಿದ್ದಾರೆ?

(ಮಕ್ಕಳ ಆಗಮನ)

**ಮಗಳು:** ಅಪ್ಪಾ.....ನನ್ನ ಹೊಸ ಬಟ್ಟೆ ನೋಡಿ, ಎಷ್ಟು ಚೆನ್ನಾಗಿದೆ, ಸರ, ಓಲೆ, ಬಳೆ ಎಲ್ಲ......

ಮಗ : ಅಪ್ಪಾ..... ನಿನಗೂ ರೇಷ್ಮೆ ಬಟ್ಟೆ ಕೊಟ್ಟಿದ್ದಾರೆ, ನೋಡಿ.

ಸುದಾಮ : ನನಗೆ ಬೇಡ, ನೀವೆಲ್ಲ ಧರಿಸಿಕೊಳ್ಳಿ. ನನಗೆ ಆ ಕೃಷ್ಣದೇವನ ಸ್ನೇಹವೇ ರೇಷ್ಮೆ ಬಟ್ಟೆ, ಅವನ ಮಾತೆ ನನಗೆ ಆಭರಣ. ಅವನಂತಹ ಗೆಳೆಯನನ್ನು ಪಡೆದ ನಾನೇ ಧನ್ಯ.

(ಎಲ್ಲರೂ ನರ್ತಿಸುವರು.)

(ಹಿನ್ನೆಲೆಯಲ್ಲಿ ಶ್ರೀಕೃಷ್ಣ ಹಾಗೂ ರುಕ್ಮಿಣಿ ನರ್ತಿಸುತ್ತ ಸಾಗುವರು)

ಕ್ಷೇತ್ರ : ಆಲಿಸುವುದು.

ಸಾಮರ್ಥ್ಯ : ಸಂವಾದ, ಚರ್ಚೆ ಮತ್ತು ನಾಟಕಗಳನ್ನು ಆಲಿಸಿ ಅಭಿನಯಕ್ಕೆ ತಕ್ಕಂತೆ ಅರ್ಥ ಮಾಡಿಕೊಳ್ಳುವುದು.

**ಆಶಯ :**

ಗೆಳೆತನವೆಂಬುದು ಪವಿತ್ರವಾದ ಒಂದು ಸಂಬಂಧ. ಇಲ್ಲಿ ಬಡತನ, ಸಿರಿತನ, ವಿದ್ಯಾವಂತ, ಅವಿದ್ಯಾವಂತ ಇತ್ಯಾದಿಯಾದ ಯಾವುದೇ ಬಗೆಯ ಭೇದ ಭಾವ ಇರುವುದಿಲ್ಲ. ಹುಟ್ಟುತ್ತಾ ಅಣ್ಣ ತಮ್ಮಂದಿರಾಗಿಯೂ ಬೆಳೆಯುತ್ತಾ ದಾಯಾದಿಗಳಾಗಿಯೂ ಬದುಕು ಸಾಗಿಸುವವರು ನಮ್ಮ ನಡುವೆ ಇದ್ದಾರೆ. ಒಂದೇ ತರಗತಿಯಲ್ಲಿ ಕಲಿತ ಬಾಲ್ಯ ಸ್ನೇಹಿತರೂ ಸಿರಿತನ, ಬಡತನ ನಿಮಿತ್ತವಾಗಿ ಬೇರ್ಪಡುತ್ತಾರೆ. ನಿಜವಾದ ಗೆಳೆತನದ ಬೆಸುಗೆ ಮುರಿದು ಹೋಗುವಂಥದ್ದಲ್ಲ ಎಂಬುದನ್ನು ಎತ್ತಿ ತೋರಿಸುವುದು ಪ್ರಸ್ತುತ ಪಾಠದ ಆಶಯವಾಗಿದೆ.



**ಕವಿ ಕೃತಿ ಪರಿಚಯ:**



ವಿ.ಎಸ್. ಶಿರಹಟ್ಟಿಮಠರು ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನ ಹಲಗಲಿಯ ಶ್ರೀ ವೀರಭದ್ರೇಶ್ವರ ಪ್ರೌಢಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಗದಗ ಜಿಲ್ಲೆಯ ಹೊಂಬಳದಲ್ಲಿ ದಿನಾಂಕ ೧-೨-೧೯೫೩ರಂದು ಜನಿಸಿದ ವಿ.ಎಸ್. ಶಿರಹಟ್ಟಿಮಠರ ತಂದೆ ಶಂಕರಯ್ಯ, ತಾಯಿ ಗುರುಸಿದ್ಧವ್ವ. ಅನುವಾದಕರಾಗಿ, ನಾಟಕಕಾರರಾಗಿ ಗುರುತಿಸಿಕೊಂಡಿದ್ದಾರೆ. ತುಂಬಿದ ಕೊಡ, ನರಗುಂದ ಬಂಡಾಯ, ಮಾಡಿದ್ದುಣ್ಣೋ ಮಾರಾಯ, ಗುಣವಂತ ರಾಜಕುಮಾರ ಮುಂತಾದ ಅರವತ್ತಕ್ಕೂ ಹೆಚ್ಚು ಮಕ್ಕಳ ನಾಟಕಗಳನ್ನು ರಚಿಸಿದ್ದಾರೆ.

ರಂಗಭೂಮಿ ಹಾಗೂ ಮಕ್ಕಳ ರಂಗಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯನ್ನು ಗುರುತಿಸಿ ೨೦೦೨ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿಯು ಪ್ರಶಸ್ತಿ ನೀಡಿ ಗೌರವಿಸಿದೆ. ವಿ.ಎಸ್ ಶಿರಹಟ್ಟಿಮಠರವರ "ಹೂವಿನ ಹಂದರ" ಕೃತಿಯಿಂದ 'ಕೃಷ್ಣ -ಸುದಾಮ' ನಾಟಕವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಅರ್ಥ ತಿಳಿಯಿರಿ :**

ಕಂಗಾಲಾಗು – ಕಂಗೆಡು, ತಬ್ಬಿಬ್ಬಾಗು. ವಿಧೇಯತೆ – ನಮ್ರತೆ, ಅನುಸರಿಸುವ ಗುಣ. ಪಾಂಡಿತ್ಯ – ವಿದ್ವತ್ತು. ಸ್ನೇಹ–ಗೆಳೆತನ, ಮಿತ್ರತ್ವ. ಸಂಕೋಚ – ಕುಗ್ಗುವುದು, ಮುದುಡುವುದು. ಕೃಪೆ – ದಯೆ, ಕರುಣೆ. ಆಶ್ಚರ್ಯ – ವಿಸ್ಮಯ, ಬೆರಗು. ಆಭರಣ– ಒಡವೆ. ಇಂಗಿತ – ಆಶಯ.

**ವಿವರ ತಿಳಿ :**

**ದಾಯಾದಿ** : ಅಣ್ಣತಮ್ಮಂದಿರ ಮಕ್ಕಳು.

**ಶತಪದಿಸು** : ಹಿಂದಕ್ಕೆ ಮುಂದಕ್ಕೆ ನಡೆದಾಡು.

**ರಾಜಧರ್ಮ** : ಅರಸನು ಪ್ರಜೆಗಳ ಕ್ಷೇಮಕ್ಕಾಗಿ ಪಾಲಿಸಬೇಕಾದ ನೀತಿ.

**ಕಾಲಕೂಡಿಬರು** : ಸಮಯ, ಸಂದರ್ಭ ಒದಗಿ ಬರುವುದು.

**ಗುರುಕುಲ** : ಹಿಂದಿನ ಕಾಲದಲ್ಲಿ ಗುರುಗಳ ಮನೆಯೇ ಪಾಠಶಾಲೆ ಆಗಿರುತ್ತಿತ್ತು. ಅದನ್ನು ಗುರುಕುಲ ಎನ್ನುವರು.

## ವ್ಯಾಕರಣ ಮಾಹಿತಿ

### ಕರ್ತೃ, ಕರ್ಮ, ಕ್ರಿಯಾಪದ

**ಕೆಳಗೆ ಕೊಟ್ಟಿರುವ ವಾಕ್ಯಗಳನ್ನು ಗಮನಿಸಿ ಓದಿರಿ.**

೧. ಪ್ರಸಾದನು ಮುಖ ಕೈಕಾಲು ತೊಳೆದುಬಂದನು.

೨. ಅಬ್ದುಲ್ಲನು ಮುತ್ತುಗಳನ್ನು ಮಾರಿದನು.

೩. ಗಿಳಿಯು ಹಣ್ಣನ್ನು ತಿಂದಿತು.



ಇಲ್ಲಿ 'ಪ್ರಸಾದ,' 'ಅಬ್ದುಲ್ಲ,' 'ಗಿಳಿ' ಎಂಬ ಪದಗಳು ಕೆಲಸಮಾಡುವವರು 'ಯಾರು' ಎಂಬುದನ್ನು ಸೂಚಿಸುತ್ತವೆ. ಇವು ಕರ್ತೃಪದಗಳು.

'ಮುಖ ಕೈಕಾಲು,' 'ಮುತ್ತುಗಳನ್ನು,' 'ಹಣ್ಣನ್ನು' ಎಂಬ ಪದಗಳು ಆಯಾ ಕೆಲಸಕ್ಕೆ ಪೂರಕವಾಗಿ ಏನನ್ನು ಎಂಬ ಪ್ರಶ್ನೆಯನ್ನು ಎತ್ತುತ್ತವೆ. ಇವು ಕರ್ಮ ಪದಗಳು.

'ತೊಳೆದು ಬಂದನು,' 'ಮಾರಿದನು,' 'ತಿಂದಿತು' ಎಂಬ ಪದಗಳು ಯಾವ ಕೆಲಸ ಎಂಬುದನ್ನು ಹೇಳುತ್ತವೆ. ಇವು ಕ್ರಿಯಾಪದಗಳು.

ಅಂದರೆ ಇಲ್ಲಿ ಕ್ರಮವಾಗಿ– 'ಬರುವ' 'ಮಾರುವ' 'ತಿನ್ನುವ' ಕೆಲಸವನ್ನು ಇವು ತಿಳಿಸುತ್ತವೆ. ಕೆಲಸವನ್ನು ತಿಳಿಸುವ ಪದಗಳು ಕ್ರಿಯಾಪದಗಳು. (ಕೆಲಸ = ಕ್ರಿಯೆ) ಆ ಕ್ರಿಯೆಗೆ ಸಂಬಂಧಿಸಿದಂತೆ 'ಏನನ್ನು' ಎಂಬುದನ್ನು ಸೂಚಿಸುವ ಪದಗಳು ಕರ್ಮಪದಗಳು. ಆ ಕ್ರಿಯೆಯನ್ನು ಮಾಡುತ್ತಿರುವವರು 'ಯಾರು' ಇಲ್ಲವೇ 'ಯಾವುದು' ಎಂಬುದನ್ನು ಸೂಚಿಸುವ ಪದಗಳು ಕರ್ತೃಪದಗಳು.

ಇದಕ್ಕೆ ಪೂರಕವಾಗಿ ಇನ್ನೂ ಕೆಲವು ಉದಾಹರಣೆಗಳನ್ನು ಗಮನಿಸೋಣ:

- ರೋಜಾಳು ಗೆಳತಿಯನ್ನು ಮೆಚ್ಚಿದಳು.
- ಪಾರಿವಾಳವು ಕಾಳುಗಳನ್ನು ನೋಡಿತು.
- ಗೆಳೆಯರು ಆಟವನ್ನು ಆಡಿದರು.

| ಪದ ವಿವರ | ಪ್ರಶ್ನೆ | ಉತ್ತರ |
|---|---|---|
| ಕರ್ತೃಪದ | ಯಾರು? | ರೋಜಾ, ಪಾರಿವಾಳ, ಗೆಳೆಯರು. |
| ಕರ್ಮಪದ | ಏನನ್ನು? ಯಾರನ್ನು? | ಗೆಳತಿಯನ್ನು, ಕಾಳುಗಳನ್ನು, ಆಟವನ್ನು. |
| ಕ್ರಿಯಾಪದ | ಮಾಡುವರು? | ಮೆಚ್ಚಿದಳು, ನೋಡಿತು, ಆಡಿದರು. |

ವಾಕ್ಯ ರಚನೆಯಲ್ಲಿ ಇವು ಮೂರು ಅಂಶಗಳು. ಮುಖ್ಯವೆನಿಸುತ್ತವೆ. ದೀರ್ಘ ವಾಕ್ಯಗಳಲ್ಲಿ ಈ ಮೂರು ಅಂಶಗಳನ್ನು ಕಂಡುಕೊಳ್ಳಲು ಅಭ್ಯಾಸ ಮಾಡಿರಿ.



## ಅಭ್ಯಾಸಗಳು

**ಅ. ಈ ಪದಗಳಿಗೆ ಎರಡು ಸಮಾನಾರ್ಥಕ ಪದಗಳನ್ನು ಬರೆಯಿರಿ.**

೧. ಗೆಳೆಯ :　೨. ಹೆಂಡತಿ :　೩. ರಾಜ :　೪. ದುಡಿಮೆ :

**ಆ. ಈ ಪದಗಳನ್ನು ಬಳಸಿ ಸ್ವಂತ ವಾಕ್ಯ ರಚಿಸಿರಿ.**

೧. ಪರಮಮಿತ್ರ　೨. ವಿಶ್ರಾಂತಿ　೩. ಸತ್ಕಾರ　೪. ಸಂತೋಷ　೫. ಶ್ರಮಿಸು

**ಇ. ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಸುದಾಮ ಯಾವುದನ್ನು ಮಾನವ ಧರ್ಮ ಎನ್ನುತ್ತಾನೆ?

೨. ಯಾರಿಗಾಗಿ ಶ್ರೀಕೃಷ್ಣನ ಬಳಿ ಸಹಾಯ ಕೇಳಲು ಸುದಾಮನ ಪತ್ನಿ ಹೇಳುತ್ತಾಳೆ?

೩. ಸುದಾಮನ ಕಣ್ಣಲ್ಲಿ ನೀರು ಏಕೆ ಬಂತು?

೪. ಮನೆಗೆ ಮರಳಿದ ಸುದಾಮನು ಏನನ್ನು ಕಂಡನು?

೫. ಸುದಾಮನ ಮನೆಯನ್ನು ಕಟ್ಟಿಸಿದವರು ಯಾರು?

ಈ. ಕೆಳಗಿನ ಮಾತುಗಳನ್ನು ಯಾರು, ಯಾರಿಗೆ, ಯಾವಾಗ ಹೇಳಿದರು?

೧. ನನ್ನನ್ನು ಕಂಡರೆ ಅವನಿಗೆ ಅಪಾರ ಪ್ರೀತಿ, ಸ್ನೇಹ, ಗೌರವ.

೨. ಹಸಿದಿರುವ ಮಕ್ಕಳಿಗೋಸ್ಕರನಾದರೂ ಹೋಗಿ ಕೇಳಿ.

೩. ನನಗೆ ಗುರುಕುಲದ ಜೀವನ ನೆನಪಾಗುತ್ತದೆ.

೪. ನಿನಗೂ ರೇಷ್ಮೆ ಬಟ್ಟೆ ಕೊಟ್ಟಿದ್ದಾರೆ.

ಉ. ಕೆಳಗಿನ ಪ್ರಶ್ನೆಗಳಿಗೆ ಐದು-ಆರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕೃಷ್ಣ-ಸುದಾಮರು ಗುರುಕುಲದಲ್ಲಿ ಕಳೆದ ದಿನಗಳನ್ನು ಪರಸ್ಪರ ನೆನಪಿಸಿಕೊಂಡದ್ದು ಹೇಗೆ?

೨. ಕೃಷ್ಣನು ಸುದಾಮನಿಗೆ ಮನೆ ಕಟ್ಟಿಸಿಕೊಟ್ಟ ಸಂದರ್ಭವನ್ನು ವಿವರಿಸಿರಿ?

ಊ. ಕೆಳಗಿನ ವಾಕ್ಯಗಳಲ್ಲಿಯ ಕರ್ತೃ/ಕರ್ಮ/ಕ್ರಿಯಾಪದಗಳನ್ನು ಗುರುತಿಸಿ ಪಟ್ಟಿ ಮಾಡಿ ಬರೆಯಿರಿ.

೧. ಸರಸ್ವತಿ ಶಾಲೆಗೆ ಹೋಗುತ್ತಾಳೆ.

೨. ಮಹಮ್ಮದನು ಮನೆಗೆ ಬರುತ್ತಾನೆ.

೩. ಗಿಳಿಗಳು ಆಕಾಶದಲ್ಲಿ ಹಾರಾಡುತ್ತವೆ.

ಋ. ಕರ್ತೃ/ಕರ್ಮ/ಕ್ರಿಯಾಪದಗಳನ್ನು ಸರಿಯಾಗಿ ಜೋಡಿಸಿ ವಾಕ್ಯಗಳನ್ನು ಬರೆಯಿರಿ.

ಉದಾ: ಎಳೆಯುತ್ತದೆ ಬಂಡಿಯನ್ನು ಎತ್ತು

ಎತ್ತು ಬಂಡಿಯನ್ನು ಎಳೆಯುತ್ತದೆ.

೧. ಬೀಳುತ್ತದೆ ಕಾಯಿ ಮರದಿಂದ

೨. ಅಹಿಂಸೆಯನ್ನು ಪ್ರತಿಪಾದಿಸಿದರು ಗಾಂಧೀಜಿ

೩. ಉದಯಿಸುತ್ತಾನೆ ಸೂರ್ಯನು ಮುಂಜಾನೆ



ಎ. ಚರ್ಚಾಸ್ಪರ್ಧೆಗಳನ್ನು ಏರ್ಪಡಿಸುವುದು.

೧. ಹಳ್ಳಿ ಜೀವನ ಚಂದವೋ? ಪಟ್ಟಣ ಜೀವನ ಚಂದವೋ?

೨. ನಮ್ಮ ಕೆಲಸ ಮಾತ್ರ ಮಾಡ್ಕೋಬೇಕಾ? ಬೇರೆಯವರ ಕೆಲಸ ಮಾಡಿ ಕೊಡ್ಬೇಕಾ?

೩. ಕಥೆ ಇಷ್ಟಾನಾ? ಹಾಡು ಇಷ್ಟಾನಾ?

ಭಾಷಾ ಆಟಗಳು

ಅ. ಕೃಷ್ಣ-ಅರ್ಜುನ-ಭೀಮ

೧. ವಿದ್ಯಾರ್ಥಿಗಳನ್ನು ವೃತ್ತಾಕಾರವಾಗಿ ನಿಲ್ಲಿಸುವುದು.

೨. ಅವರ ಕಿವಿಯಲ್ಲಿ ಮೇಲಿನದೊಂದು ಹೆಸರನ್ನು ಹೇಳುತ್ತಾ ಬರುವುದು.

೩. ಯಾರುಯಾರಿಗೆ ಯಾವ ಹೆಸರು ಬಂದಿದೆಯೋ ಇನ್ನೊಬ್ಬರಿಗೆ ಹೇಳಬಾರದು.

೪. ಎಲ್ಲರನ್ನು ಸ್ವಲ್ಪ ಹಿಂದಕ್ಕೆ ಕಳಿಸುವುದು.

೫. ಹೆಸರಿಗೆ ತಕ್ಕಂತೆ ನಟನೆ ಮಾಡುತ್ತಾ ಒಂದೇ ಪಾತ್ರದವರು ಒಂದು ಕಡೆ ಸೇರಬೇಕು. ಯಾರು ಸನ್ನೆ ಮಾಡಬಾರದು. ಮಾತನಾಡಬಾರದು.

೬. ಯಾವ ಪಾತ್ರದ ಗುಂಪು ಮೊದಲು ಸೇರುತ್ತದೋ ಅವರು ವಿಜಯಶಾಲಿಗಳು.

(ಕೃಷ್ಣನ ಹೆಸರು ಬಂದವರು ಕೊಳಲೂದುವ /ಅಂಬೆಗಾಲಿಟ್ಟು ನಡೆಯುವ /ಬೆಣ್ಣೆ ತಿನ್ನುವ ನಟನೆ ಮಾಡಬಹುದು.)

## ಯೋಜನೆ

**ಅ. ಕೆಳಗೆ ಹೇಳಿದ ಮಕ್ಕಳ ನಾಟಕ ಪುಸ್ತಕಗಳನ್ನು ಸಂಗ್ರಹಿಸಿರಿ. ಅವುಗಳಲ್ಲಿ ಒಂದು ನಾಟಕವನ್ನು ನಿಮ್ಮ ಶಾಲಾ ಕಾರ್ಯಕ್ರಮದಲ್ಲಿ ಅಭಿನಯಿಸಿರಿ.**

೧. ಕುವೆಂಪು– ಬೊಮ್ಮನಹಳ್ಳಿಯ ಕಿಂದರಿ ಜೋಗಿ.

೨. ಬಿ.ವಿ.ಕಾರಂತ– ಪಂಜರ ಶಾಲೆ.

೩. ವೈದೇಹಿ– ಸೂರ್ಯ ಬಂದ.

೪. ಕೆ.ವಿ. ಸುಬ್ಬಣ್ಣ– ನೀಲಿ ಕುದುರೆ.

೫. ಚಂದ್ರಶೇಖರ ಕಂಬಾರ– ಕಿಟ್ಟಿಕಥೆ.



## ಓದಿಗೆ ಮನ್ನಣೆ :

೧. ಏಸುಕ್ರಿಸ್ತನು ಮಗ್ದಲದ ಮರಿಯಳಿಗೆ ದಯೆತೋರಿದ ಘಟನೆಯನ್ನು ತಿಳಿಯಿರಿ.

೨. ಬುದ್ಧನು ಅಂಗುಲಿಮಾಲನ ಮನಸ್ಸನ್ನು ಪರಿವರ್ತಿಸಿದ ಘಟನೆಯನ್ನು ಓದಿರಿ.

೩. ಚಂದಮಾಮ, ಅಮರಚಿತ್ರಕಥಾ ಮುಂತಾದ ಪುಸ್ತಿಕೆಗಳಲ್ಲಿ ಬರುವ ಪುರಾಣದ ಕಥೆಗಳನ್ನು ಓದಿರಿ.

## ಶುಭ ನುಡಿ :

೧. ಯಾವುದು ಜೀವಿಗಳ ಹಿತ ಸಾಧನೆಗೆ ಸಹಕಾರಿಯಾಗುವುದೋ ಅದೇ ಧರ್ಮ.

೨. ಮಾನವೀಯತೆಯೇ ಮನುಷ್ಯ ಧರ್ಮ.

೩. ಪ್ರೀತಿಯು ನಮ್ಮ ಲಾಂಛನವಾಗಿರಲಿ, ಮಾನವೀಯತೆಯು ನಮ್ಮ ಆಲೋಚನೆಯಾಗಿರಲಿ.



ಪೂರಕ ಪಾಠ –

# ನಾಟ್ಯಕಲಾ ದುರಂಧರ ಮಹಮ್ಮದ್ ಪೀರ್



ನಮ್ಮ ಕನ್ನಡ ಸಾಹಿತ್ಯಕ್ಕೆ ಸುಮಾರು ೧೫೦೦ ವರ್ಷಗಳ ಇತಿಹಾಸವಿದೆ. ಜನಪದ ಗೀತೆ, ಕಥೆಗಳು, ಲಾವಣಿ ಹಾಗೂ ರಂಗಭೂಮಿ ಕನ್ನಡ ಸಾಹಿತ್ಯವನ್ನು ಜನಸಾಮಾನ್ಯರಿಗೆ ಮೌಖಿಕವಾಗಿ ತಲುಪಿಸುತ್ತ ಬಂದಿವೆ. ಪುರಾಣ, ಇತಿಹಾಸ ಮುಂತಾದ ಪ್ರಸಿದ್ಧವಾದ ಸಾಹಿತ್ಯವನ್ನು ಮನೋರಂಜನೆಯ ಜೊತೆಗೆ ರವಾನಿಸುವ ಕಾರ್ಯವನ್ನು ರಂಗಭೂಮಿ ವಹಿಸಿಕೊಂಡಿದೆ. ಶ್ರವ್ಯ ದೃಶ್ಯ ಸಾಧನವಾದ ರಂಗಭೂಮಿಯ ಪಾತ್ರಗಳು ಬಹು ಬೇಗನೆ ಜನರನ್ನು ತಲುಪುತ್ತವೆ. ರಂಗಭೂಮಿ ಕಲೆಯನ್ನು ಉಳಿಸಿ ಬೆಳೆಸುವುದರಲ್ಲಿ ಹಲವಾರು ಮಹನೀಯರು ತಮ್ಮ ಜೀವನವನ್ನೇ ಮುಡುಪಾಗಿರಿಸಿದ್ದಾರೆ. ಅಂತಹ ಮಹಾನ್ ಕಲಾವಿದರಲ್ಲಿ ಮಹಮ್ಮದ್ ಪೀರ್ ಒಬ್ಬರು.

ಮಹಮ್ಮದ್ ಪೀರ್ ಕನ್ನಡ ವೃತ್ತಿ ರಂಗಭೂಮಿಯ ಪ್ರಸಿದ್ಧ ನಟ. ಮೈಸೂರಿನ ಮಧ್ಯಮ ವರ್ಗದ ಕುಟುಂಬವೊಂದರಲ್ಲಿ ಜನಿಸಿದರು. ಇವರ ತಂದೆ ಪೈಲ್ವಾನ್ ಮೊಹಿಯುದ್ದೀನ್. ತಾಯಿ ಮುಬಾರಕ್ಬಿ. ತಂದೆತಾಯಿಯರನ್ನು ಬಾಲ್ಯದಲ್ಲಿಯೆ ಕಳೆದುಕೊಂಡ ಪೀರ್ ಅವರು ಅನಂತರ ಸೋದರಮಾವನ ಆಶ್ರಯದಲ್ಲಿ ಬೆಳೆದರು. ಇವರು ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ಓದುತ್ತಿರುವಾಗಲೆ ನಾಟಕದಲ್ಲಿ ಅಭಿರುಚಿ ಹತ್ತಿತು. ಅವಕಾಶ ದೊರೆತಾಗಲೆಲ್ಲಾ ತಪ್ಪದೆ ನಾಟಕಗಳನ್ನು ನೋಡುತ್ತಿದ್ದ ಇವರ ಮೇಲೆ ವರದಾಚಾರ್ಯ, ಕೃಷ್ಣಮೂರ್ತಿರಾವ್, ಬಳ್ಳಾರಿ ರಾಘವರವರ ಪ್ರಭಾವವಾಯಿತು. ನಾಟಕದ ಗೀಳಿನಿಂದಾಗಿ ವಿದ್ಯಾಭ್ಯಾಸ ಕುಂಠಿತಗೊಂಡಿತು. ೧೯೧೫ರಲ್ಲಿ ಮೈಸೂರಿನಲ್ಲಿಯೇ ಇದ್ದ ಗಿರಿಧರಲಾಲ್ ಕಂಪನಿ ಪ್ರವೇಶಿಸುವ ಮೂಲಕ ಇವರು ರಂಗಭೂಮಿಗೆ ಪದಾರ್ಪಣ ಮಾಡಿದರು.

ಕೃಷ್ಣಲೀಲಾ ಇವರು ಅಭಿನಯಿಸಿದ ಮೊದಲ ನಾಟಕ. ೧೯೨೦ರಲ್ಲಿ ಪೀರ್ ಅವರು ಈ ಸಂಸ್ಥೆಯನ್ನು ಬಿಟ್ಟು ಬೆಂಗಳೂರಿಗೆ ಹೋಗಿ ಗುರುಕಾರ್ ಕಂಪನಿ ಎಂದು ಪ್ರಸಿದ್ಧವಾಗಿದ್ದ ನಟಭಯಂಕರ ಗಂಗಾಧರರಾಯರ 'ಭಾರತ ಜನಮನೋಲ್ಲಾಸಿನಿ' ನಾಟಕ ಕಂಪನಿಗೆ ಸೇರಿದರು. ಇಲ್ಲಿ ಎಂಟು ವರ್ಷಗಳ ಕಾಲ ದುಡಿದರು. ಇಲ್ಲಿರುವಾಗ 'ಕಾಳಿದಾಸ'ದಲ್ಲಿ ಕುರುಬ, 'ಸದಾರಮೆ'ಯಲ್ಲಿ ಕಳ್ಳ, 'ಪ್ರಭಾಮಣಿ'ಯಲ್ಲಿ ವಿರೋಚನ, 'ಸುಭದ್ರಾ'ದಲ್ಲಿ ಬ್ರಾಹ್ಮಣ– ಇಂತಹ ಹಾಸ್ಯ ಪಾತ್ರಗಳು ಅವರ ಪಾಲಿನದಾದವು. ಬರುಬರುತ್ತಾ ಪೀರ್ ಅವರು ಕಂಪನಿಯ ನಟರಾಗಿಯಷ್ಟೇ ಅಲ್ಲದೆ ಆ ಕಂಪನಿಯ ಸಲಹೆಗಾರರಾಗಿ, ಕಾರ್ಯದರ್ಶಿಯಾಗಿ, ಸ್ಟೇಜ್ ಮ್ಯಾನೇಜರ್ ಆಗಿ ಕೊನೆಗೆ ಕಂಪನಿಯ ಮ್ಯಾನೇಜರ್ ಆದರು. ಕೆಲವು ಸಹ ನಟರ ಸಹಕಾರದಿಂದ ೧೯೩೨ರಲ್ಲಿ ಚಂದ್ರಕಲಾ ನಾಟಕ ಮಂಡಳಿಯನ್ನು ಸ್ಥಾಪಿಸಿದರು. ಐದೂವರೆ ವರ್ಷಗಳ ಕಾಲ ಅಸ್ತಿತ್ವದಲ್ಲಿದ್ದ ಈ ಸಂಸ್ಥೆ ಪೀರ್‌ರವರ ನೇತೃತ್ವದಲ್ಲಿ ಸಾಧಿಸಿದ ಕಲಾಸಿದ್ಧಿ ಅಸಾಮಾನ್ಯ. ಈ ಕಂಪನಿಯ ಮೊದಲ ಪ್ರಯೋಗ ದ್ವಿಜೇಂದ್ರಲಾಲ್‌ರಾಯರ 'ಷಾಜಹಾನ' ಪ್ರಚಂಡ ಜನಪ್ರಿಯತೆ ಪಡೆಯಿತು. ಒಂದೇ ನಾಟಕ ಒಂಬತ್ತು ದಿನಗಳು

ಸತತ ಪ್ರದರ್ಶಿತವಾದ ಕೀರ್ತಿ ಇದರದಾಯಿತು. ಎಚ್.ಎಲ್.ಎನ್.ಸಿಂಹ ಅವರ 'ಸಂಸಾರ ನೌಕೆ' (೧೯೩೨), ಪುಟ್ಟಸ್ವಾಮಯ್ಯನವರ 'ಗೌತಮ ಬುದ್ಧ' (೧೯೩೪) ಮುಂತಾದ ಹೊಸ ಬಗೆಯ ನಾಟಕಗಳನ್ನು ಈ ಮಂಡಳಿ ಆಡಿತು. ಈ ಮೂರು ವಿಶಿಷ್ಟ ನಾಟಕಗಳಲ್ಲದೆ ಪ್ರಭಾಮಣಿ ವಿಜಯ, ವೀರಸಿಂಹ ಚರಿತ್ರೆ, ಸದಾರಮೆ, ಸುಭದ್ರಾ ಪರಿಣಯ ಮೊದಲಾದ ನಾಟಕಗಳೂ ಈ ಮಂಡಳಿಯ ನಾಟಕಗಳಾದವು. 'ಸಂಸಾರ ನೌಕ'ದಲ್ಲಿ ಸುಂದರ, 'ಷಾಜಹಾನ್' ನಾಟಕದಲ್ಲಿ ದಾರಾ, 'ಗೌತಮಬುದ್ಧ'ದಲ್ಲಿ ಗೌತಮ ಈ ಪಾತ್ರಗಳ ಅಭಿನಯ ವಿಶೇಷ ಖ್ಯಾತಿಗೆ ಪಾತ್ರವಾಗಿ ಪೀರ್ ಅವರ ಹೆಸರು ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಚಿರಸ್ಥಾಯಿಯಾಯಿತು. ವರದಾಚಾರ್ಯ, ರಾಘವರ ಅನಂತರ ರಂಗಾಭಿನಯ ಕಲೆ ಪ್ರಖರವಾದುದು ಪೀರ್ ಅವರಿಂದಲೇ ಎಂದರೆ ಅತಿಶಯೋಕ್ತಿಯಲ್ಲ. ಕನ್ನಡ ರಾಘವ ಎಂದೇ ಪ್ರಸಿದ್ಧರಾದ ಪೀರ್ ಅವರಿಗೆ ೧೯೩೫ರಲ್ಲಿ ಹುಬ್ಬಳ್ಳಿಯಲ್ಲಿ ಮುದವೀಡು ಕೃಷ್ಣರಾಯರ ನೇತೃತ್ವದಲ್ಲಿ ನಾಟ್ಯ ಕಲಾ ದುರಂಧರ ಪ್ರಶಸ್ತಿ ನೀಡಲಾಯಿತು.

ಐದೂವರೆ ಅಡಿ ಎತ್ತರ, ವಿಶಾಲ ಹಣೆ, ಅಗಲ ಕಣ್ಣುಗಳು, ಆಕರ್ಷಕ ಧ್ವನಿಯ ಪೀರ್ ಅವರದು ಸರಳ ಜೀವನ. ದಕ್ಷ ಅಭಿನಯ ಹಾಗೂ ಧ್ವನಿಪೂರ್ಣ ಸಂಭಾಷಣಾ ವೈಖರಿ ಇವರ ನಾಟಕಗಳ ಜೀವಾಳ. ಅಬ್ಬರದ ಸಂಗೀತ, ಹಾಡುಗಳಿಂದ ಅನೇಕ ವೇಳೆ ನಾಟಕದ ಓಟಕ್ಕೆ ಕುಂದು ಬರುತ್ತದೆ ಎಂಬುದು ಇವರ ಅಭಿಪ್ರಾಯ. ಸಂಗೀತ ಪ್ರಧಾನ ನಾಟಕಗಳ ಮಹತ್ವ ಕಡಿಮೆಯಾಗಿದ್ದಾಗ, ಜನಪ್ರಿಯತೆ ಕುಂದುತ್ತಿದ್ದಾಗ, ಸಾಹಿತ್ಯ ಮೌಲ್ಯವುಳ್ಳ ಗದ್ಯ ಕೃತಿಗಳೂ ಅಭಿನಯ ಯೋಗ್ಯ ಎಂದು ತೋರಿಸಿದ ಕೀರ್ತಿ ಪೀರ್ ಅವರಿಗೆ ಸಲ್ಲಬೇಕು.

## I. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ :

೧. ಕನ್ನಡ ರಾಘವ ಎಂದು ಪ್ರಸಿದ್ಧರಾದವರು ಯಾರು?

೨. ಮಹಮ್ಮದ್ ಪೀರ್ ಅವರು ಯಾರ ಆಶ್ರಯದಲ್ಲಿ ಬೆಳೆದರು?

೩. ಮಹಮ್ಮದ್ ಪೀರ್ ಅವರಿಗೆ ನಾಟಕದ ಅಭಿರುಚಿ ಯಾವಾಗ ಹತ್ತಿತು?

೪. ಮಹಮ್ಮದ್ ಪೀರ್ ಅವರ ಯಾವ ಪಾತ್ರಗಳು ವಿಶೇಷ ಖ್ಯಾತಿಗೆ ಪಾತ್ರವಾಗಿವೆ?

೫. ಮಹಮ್ಮದ್ ಪೀರ್‌ರವರ ತಂದೆತಾಯಿ ಹೆಸರೇನು?





ಪದ್ಯ ಪಾಠ-೭

# ಹೊಸ ಬಾಳು

ಮನೆಯ ಅಂಗಳದಲ್ಲಿ
ಗುಬ್ಬಿ, ದೇವರ ಹಕ್ಕಿ
ಚೀಂವ್ ಚೀಂವ್ ಎನ್ನುತ್ತ ಹಾಡುತಿತ್ತು
ಚಾವಡಿಯ ಗೋಡೆಯಲಿ
ಗಾಂಧಿ ತಾತನ ಚಿತ್ರ
ಗುಬ್ಬಚ್ಚಿಯನು ನಗುತ ನೋಡುತಿತ್ತು







ಪುಟ್ಟ ಹಕ್ಕಿಯು ತನ್ನ
ಕಾದಲನ ಕರೆಯುತ್ತ
ಬಿದ್ದಿರುವ ಕಾಳುಗಳ ಹುಡುಕುತಿತ್ತು
ಕಳ್ಳ ಹೆಜ್ಜೆಯ ಬೆಕ್ಕು
ಹೊಂಚು ಹಾಕುತ ಬರಲು
ಬುರ್ರನೆ ಹಾರಿ ತಾ ಪಾರಾಗುತಿತ್ತು

ಕರುಣೆ ತುಂಬಿದ ಕಣ್ಣು
ನವಿರಾದ ಹೂ ನಗೆಯು
ಮನೆ ಮಂದಿಗಳನೆಲ್ಲ ಸೆಳೆವ ನೋಟ
ಸರ್ವರೊಳು ಸವಿ ನುಡಿಯ
ಸಲ್ಲಾಪವಾಡುತಿಹ
ಹಕ್ಕಿ ಜೋಡಿಯು ಮನಕೆ ಮೋಜಿನಾಟ

ಗುಬ್ಬಚ್ಚಿ ಬಲು ಚುರುಕು
ಪಾದರಸದಾ ಸೆಳಕು
ತನ್ನ ಇನಿಯನ ಕೂಡಿ ಆಡುತಿತ್ತು
ಜೊತೆಯಾಗಿ ಹಾರಾಡಿ
ಜೊತೆಯಲ್ಲೆ ವಿಹರಿಸುತ
ಅಂಗಳಕೆ ಶೋಭೆಯನು ನೀಡುತಿತ್ತು

ಅಚ್ಚು ಮೆಚ್ಚಿನ ಜೋಡಿ
ಅನುಕೂಲ ದಾಂಪತ್ಯ
ಬೆರಗುಗೊಳಿಸುವ ಪ್ರತಿಭೆ ಗುಬ್ಬಿಗಳಿಗೆ
ಉಭಯ ಪಕ್ಷಿಗಳಲ್ಲಿ
ಮಿಗಿಲು ಯಾವುದು ಎಂದು
ಹೇಳಲಾಗದು ಬುದ್ಧಿ ಜೀವಿಗಳಿಗೆ

ಅರಳೆ ಹುಲುಕಡ್ಡಿಗಳ
ಹುಡುಕಿ ಸಂಗ್ರಹಿಸುತ್ತ
ಹಕ್ಕಿಗಳು ಕಟ್ಟಿದವು ಮನೆಯೊಂದನು
ಗಾಂಧಿ ಚಿತ್ರದ ಹಿಂದೆ
ಸಜ್ಜಾದ ಗೂಡಿನಲಿ
ಹೂಡಬೇಕೆಂಬಾಸೆ ಹೊಸ ಬಾಳನು

–ಬಿ.ಎಸ್.ಕುರ್ಕಾಲ್.



**ಕ್ಷೇತ್ರ** : ಬರೆಯುವುದು
**ಸಾಮರ್ಥ್ಯ:** ಪಾಠದಲ್ಲಿ ಬರುವ ವಿಚಾರಗಳನ್ನು ಕಥೆ, ಸಂಭಾಷಣೆ, ಸಾರಾಂಶ ರೂಪದಲ್ಲಿ ಬರೆಯುವುದು.

**ಆಶಯ :**

ಇಂದಿನ ಯಂತ್ರ ಯುಗದ ದಿನಗಳಲ್ಲಿ ಪಕ್ಷಿ ಸಂಕುಲ ವಿನಾಶದತ್ತ ಸರಿಯುತ್ತಿದೆ. ಅದರಲ್ಲೂ ನಿರುಪದ್ರವಿ ಜೀವಿ ಗುಬ್ಬಚ್ಚಿಗಳು ನಗರ ಸಂಸ್ಕೃತಿಯ ಅಬ್ಬರದಲ್ಲಿ ಕೊಚ್ಚಿ ಹೋಗುತ್ತಿವೆ. ಪಕ್ಷಿಗಳು ದುರಂತದೆಡೆಗೆ ಸಾಗುವುದು ನಿಜಕ್ಕೂ ನೋವುಂಟು ಮಾಡುವ ಸಂಗತಿ. ಎಲ್ಲೋ ಮರೆಯಾದ ಗುಬ್ಬಚ್ಚಿಗಳನ್ನು ನಮ್ಮ ಮನೆಗಳಿಗೆ ಮರಳಿ ಕರೆತರೋಣ. ನಿಸರ್ಗದ ಮುಗ್ಧ ಜೀವಿ ಪಕ್ಷಿಗಳನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಜನ ಜಾಗೃತಿ ಮೂಡಿಸುವುದು ಅವಶ್ಯವಾಗಿದೆ.

## ಕವಿ ಕೃತಿ ಪರಿಚಯ:



ಹೊರನಾಡಾದ ಮುಂಬಯಿಯಲ್ಲಿ ನೆಲೆಗೊಂಡಿರುವ **ಬಿ.ಎಸ್. ಕುರ್ಕಾಲರ** ನಿಜನಾಮಧೇಯ ಭುಜಂಗ ಶೆಟ್ಟಿ. ಜನನ: ೧೯೩೨ ಜುಲೈ ೧೭. ಇವರ ತಂದೆ ಕುರ್ಕಾಲು ಗಣಪಯ್ಯ ಶೆಟ್ಟಿ, ತಾಯಿ ಲಕ್ಷ್ಮಿಶೆಡ್ತಿ. ಹುಟ್ಟೂರಾದ ಉಡುಪಿಯ ಪಾಜಕದಿಂದ ೧೯೪೪ರಲ್ಲಿ ಮುಂಬಯಿಗೆ ಹೋದವರು ಅಲ್ಲಿ ಶಿಕ್ಷಕ ವೃತ್ತಿ ಕೈಗೊಂಡರು. ನಟ, ನಾಟಕಕಾರ, ನಿರ್ದೇಶಕ, ಕವಿ, ಪತ್ರಿಕಾ ಸಂಪಾದಕ, ಅಂಕಣಕಾರ, ಯಕ್ಷಗಾನ ಅರ್ಥಧಾರಿ– ಹೀಗೆ ವಿವಿಧ ವಲಯಗಳಲ್ಲಿ ಅವರ ಸೇವೆ ಸಂದಿದೆ. ನನ್ನ ನಿನ್ನ ಅಂತರಂಗ, ಶ್ರಾವಣ ಲಹರಿ, ಬರೆಯುವೆನು ನಿನಗಾಗಿ, ರಾಗ ರಶ್ಮಿ ಮುಂತಾದ ಕವನ ಸಂಕಲನಗಳೂ ಸೇರಿದಂತೆ ಇಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತು, ಮುಂಬಯಿ ಕರ್ನಾಟಕ ಸಂಘ ಮುಂತಾದ ಅನೇಕ ಸಂಘ ಸಂಸ್ಥೆಗಳು ಅವರಿಗೆ ಪ್ರಶಸ್ತಿಗಳನ್ನಿತ್ತು ಸನ್ಮಾನಿಸಿವೆ. ಪ್ರಸ್ತುತ ಪದ್ಯವನ್ನು ಕುರ್ಕಾಲ್ ಅವರ 'ಬರೆಯುವೆನು ನಿನಗಾಗಿ' ಕವನಸಂಕಲನದಿಂದ ಆರಿಸಲಾಗಿದೆ.



## ಅರ್ಥ ತಿಳಿಯಿರಿ:

ಚಾವಡಿ–ಜಗಲಿ, ಹಳ್ಳಿಯಲ್ಲಿ ಪಂಚಾಯತಿ ನಡೆಯುವ ಸ್ಥಳ. ಕಾದಲ–ಇನಿಯ, ಪ್ರೀತಿಸುವಾತ. ಹೊಂಚು–ಉಪಾಯ ಮಾಡು, ರಹಸ್ಯ ಕಾರ್ಯ ನಡೆಸು. ಸರ್ವರೊಳು–ಎಲ್ಲರೊಳು. ಕರುಣೆ–ಕನಿಕರ, ದಯೆ. ಮೋಜು–ವಿನೋದ, ತಮಾಷೆಯಾಟ. ಸಜ್ಜು–ಸಿದ್ಧತೆ, ತಯಾರಿ. ಸೆಳಕು–ಚುರುಕು, ಚಟುವಟಿಕೆ. ಬೆರಗು–ಆಶ್ಚರ್ಯ, ವಿಸ್ಮಯ, ಸೋಜಿಗ. ಶೋಭೆ–ಸೊಗಸು, ಸೊಬಗು. ಮಿಗಿಲು–ಶ್ರೇಷ್ಠವಾದುದು. ಸಂಗ್ರಹಿಸು– ಒಟ್ಟುಮಾಡು, ಕೂಡಿಸು. ಉಭಯ–ಎರಡು, ಜೋಡಿ. ಅರಳೆ–ಹತ್ತಿ. ಹುಲು–ಹುಲ್ಲು, ಲಘುವಾದ.

## ವಿವರ ತಿಳಿಯಿರಿ :

ಸಲ್ಲಾಪವಾಡು–ಹಿತವಾದ ಮಾತುಗಳನ್ನು ವಿನಿಮಯ ಮಾಡುವುದು.

ಅನುಕೂಲ ದಾಂಪತ್ಯ–ಗಂಡ ಹೆಂಡತಿಯರು ಪರಸ್ಪರ ಅರಿತುಕೊಂಡು ಬಾಳುವೆ ನಡೆಸುವುದು.

## ವ್ಯಾಕರಣ ಮಾಹಿತಿ

ಹಿಂದಿನ ತರಗತಿಯಲ್ಲಿ ನಾವು ಕನ್ನಡ ಸಂಧಿಗಳನ್ನು ಅಧ್ಯಯನ ಮಾಡಿದ್ದೆವು. ಈಗ ಸಂಸ್ಕೃತ ಪದಗಳು ಪರಸ್ಪರ ಪರವಾದಾಗ ಆಗುವ ಸಂಧಿಗಳ ಕುರಿತು ತಿಳಿಯೋಣ.

## ಸಂಸ್ಕೃತ ಸಂಧಿ :

**ಸವರ್ಣ ದೀರ್ಘ ಸಂಧಿಗಳು :** ಒಂದೇ ಜಾತಿಯ ಸ್ವರಾಕ್ಷರಗಳು ಪರಸ್ಪರ ಸೇರಿ ದೀರ್ಘರೂಪ ಪಡೆಯುವುದು ಸವರ್ಣದೀರ್ಘ ಸಂಧಿ. (ಉದಾ: ಪೂರ್ವಪದದ ಕೊನೆಯ 'ಅ' ಹಾಗೂ ಉತ್ತರ ಪದದ ಮೊದಲಿನ 'ಅ' ಸೇರಿ 'ಆ' ಆಗುವುದು. ಅಂತೆಯೇ ಇ + ಇ = ಈ, ಉ + ಉ = ಊ ಆಗುತ್ತವೆ)

**ಸೂಚನೆ:** ಪೂರ್ವಪದದ ಕೊನೆಯ ಅಕ್ಷರ ದೀರ್ಘವಾಗಿದ್ದರೆ ಅಡ್ಡಿಯೇನಿಲ್ಲ. ಅಂತೆಯೇ ಉತ್ತರ ಪದದ ಮೊದಲ ಅಕ್ಷರ ದೀರ್ಘವಾಗಿರಲುಬಹುದು.

**ಉದಾ:**

- ದೇವ + ಆಲಯ = ದೇವಾಲಯ (ಅ + ಆ = ಆ)
- ದೇವ + ಅಸುರ = ದೇವಾಸುರ (ಅ + ಅ = ಆ)
- ಮಹಾ + ಆತ್ಮ = ಮಹಾತ್ಮ (ಆ + ಆ = ಆ)
- ರವಿ + ಇಂದ್ರ = ರವೀಂದ್ರ (ಇ + ಇ = ಈ)
- ಗಿರಿ + ಈಶ = ಗಿರೀಶ (ಇ + ಈ = ಈ)
- ಗುರು + ಉಪದೇಶ = ಗುರೂಪದೇಶ (ಉ + ಉ = ಊ)

**ಗುಣಸಂಧಿ :** 'ಅ', 'ಆ'–ಕಾರಗಳ ಮುಂದೆ 'ಇ', 'ಈ'–ಕಾರವು ಬಂದಾಗ 'ಏ'–ಕಾರವು, 'ಉ', 'ಊ'ಕಾರವು ಬಂದಾಗ 'ಓ'ಕಾರವು, 'ಋ'–ಕಾರವು ಬಂದಾಗ 'ಅರ್'–ಕಾರವು ಸೇರಿದಾಗ ಗುಣಸಂಧಿ ಎನಿಸುವುದು.

**ಉದಾ :**

- ಸುರ + ಇಂದ್ರ = ಸುರೇಂದ್ರ (ಅ + ಇ = ಏ)
- ದೇವ + ಈಶ = ದೇವೇಶ (ಅ + ಈ = ಏ)
- ಚಂದ್ರ + ಉದಯ = ಚಂದ್ರೋದಯ (ಅ + ಉ = ಓ)
- ಮಹಾ + ಋಷಿ = ಮಹರ್ಷಿ (ಆ + ಋ = ಅರ್)



## ಅಭ್ಯಾಸಗಳು

**ಅ. ಬಿಟ್ಟ ಸ್ಥಳಗಳನ್ನು ಸರಿಯಾದ ಪದಗಳಿಂದ ಭರ್ತಿಮಾಡಿರಿ.**

೧. ಗಾಂಧೀ ತಾತನ..............................ಗುಬ್ಬಚ್ಚಿಯನು.......................................ನೋಡುತ್ತಿತ್ತು.

೨. ಬೆಕ್ಕು..............................ಹಾಕುತ ಬರಲು..............................ಹಾರಿ ತಾ ಪಾರಾಗುತ್ತಿತ್ತು.

೩. ಸಲ್ಲಾಪವಾಡುತಿಹ..............................ಜೋಡಿಯು..............................ಮೋಜಿನಾಟ.

೪. ಅಚ್ಚು.......................ಜೋಡಿ ಅನುಕೂಲ .......................ಬೆರಗುಗೊಳಿಸುವ ಪ್ರತಿಭೆ ಗುಬ್ಬಿಗಳಿಗೆ.

೫. ಸಜ್ಜಾದ..............................ನಲಿ ಹೂಡಬೇಕೆಂಬಾಸೆ ..............................ಬಾಳನು.

ಆ.ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಗೋಡೆಯ ಮೇಲೆ ಯಾರ ಚಿತ್ರವಿತ್ತು?

೨. ಪುಟ್ಟ ಹಕ್ಕಿಯು ಏನನ್ನು ಹುಡುಕುತ್ತಿತ್ತು?

೩. ಗುಬ್ಬಚ್ಚಿಗಳದ್ದು ಯಾವ ಬಗೆಯ ದಾಂಪತ್ಯ?

೪. ಗುಬ್ಬಚ್ಚಿಗಳು ಏನನ್ನು ಸಂಗ್ರಹಿಸುತ್ತಿದ್ದವು?

೫. ಈ ಕವನವನ್ನು ಯಾವ ಸಂಕಲನದಿಂದ ಆರಿಸಲಾಗಿದೆ?

ಇ. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿರಿ.

೧. ಗುಬ್ಬಚ್ಚಿಯು ಮನೆಯ ಅಂಗಳಕ್ಕೆ ಶೋಭೆ ಹೇಗೆ ತರುತ್ತಿತ್ತು?

೨. ಗುಬ್ಬಚ್ಚಿಯ ಪ್ರತಿಭೆಯನ್ನು ಕವಿ ಹೇಗೆ ವಿವರಿಸಿದ್ದಾರೆ?

ಈ. ಈ ಪದಗಳನ್ನು ಬಿಡಿಸಿ ಬರೆದು ಸಂಧಿ ಹೆಸರಿಸಿರಿ.

೧. ಪಾತ್ರಾಭಿನಯ        ೨. ಮಹರ್ಷಿ

೩. ಶಬ್ದಾಲಂಕಾರ        ೪. ಚತುರೋಕ್ತಿ

ಉ. ಇವುಗಳಿಗೆ ತಲಾ ಎರಡು ಉದಾಹರಣೆಗಳನ್ನು ಬರೆಯಿರಿ

೧. ಸವರ್ಣದೀರ್ಘ ಸಂಧಿ–        ೨. ಗುಣಸಂಧಿ–

ಊ. ನುಡಿಗಟ್ಟಿನ ಸಹಾಯದಿಂದ ವಾಕ್ಯ ರಚಿಸಿರಿ.

೧. ಹೊಂಚುಹಾಕು        ೨. ಬೆಕ್ಕಸಬೆರಗಾಗು

೩. ಮನೆಮಂದಿ        ೪. ಹುಲುಕಡ್ಡಿ

ಋ. ಅಂಕಣದಲ್ಲಿರುವ ಅಕ್ಷರಗಳನ್ನು ಹೇಗೆ ಬೇಕಾದರೂ/ ಎಲ್ಲಿಂದ ಬೇಕಾದರೂ ಉಪಯೋಗಿಸಿ ೫೦ಕ್ಕಿಂತ ಹೆಚ್ಚು ಶಬ್ದಗಳನ್ನು ಮಾಡಬಹುದು. ನೀವೆಷ್ಟು ಮಾಡಬಲ್ಲಿರಿ? ಅತಿ ಹೆಚ್ಚು ಪದ ರಚಿಸಿದವರಿಗೆ ಮೆಚ್ಚುಗೆ ವ್ಯಕ್ತಪಡಿಸಿರಿ.

ಉದಾ: ದೊಡ್ಡ, ಮೊಗ್ಗು,

| | | | | |
|---|---|---|---|---|
| ಚ | ಕ್ಕ | ಚೊ | ಅ | ಮ |
| ರೆ | ಸ | ಳು | ಗ್ಗು | ರ |
| ಜ | ಹೆ | ಣ | ಮೊ | ಹಿ |
| ಬೆ | ಕ | ಚ್ಚು | ವ | ತ |
| ನು | ಗ | ಡ್ಡ | ದೊ | ಗು |

## ಭಾಷಾ ಆಟ

ಅ. ಶಿಕ್ಷಕರು ಬಾಯಾರಿದ ಕಾಗೆಯ ಕಥೆಯನ್ನು ಹೇಳುವುದು. ಅನಂತರ ವಿದ್ಯಾರ್ಥಿಗಳು ಕಥೆಯನ್ನು ತಮ್ಮ ಮಾತಿನಲ್ಲಿ ಬರೆಯುವುದು.

ಆ. ವೈದ್ಯ-ರೋಗಿ ಸಂಭಾಷಣೆಯನ್ನು ಮಕ್ಕಳಿಂದ ಮಾಡಿಸುವುದು

ಉದಾ:- ವೈದ್ಯ: (ಒಬ್ಬ ಹುಡುಗನನ್ನು ಮಲಗಿಸಿ ಸ್ಟೆಥೋಸ್ಕೋಪ್ ಇಟ್ಟು ನೋಡುತ್ತಾ ಏನಾಗಿದೆ, ನಿನಗೆ?

ರೋಗಿ: (ನಡುಗುತ್ತ) ನನಗೆ ರಾತ್ರಿಯೆಲ್ಲ ಚಳಿಜ್ವರ ಬಂದಿತು.

ವೈದ್ಯ: ನಾಲಿಗೆ ಚಾಚು.

ರೋಗಿ: (ನಾಲಿಗೆ ಚಾಚುತ್ತ ಒಂಥರ ಧ್ವನಿ ಹೊರಡಿಸುವನು)

ವೈದ್ಯ: (ಮಾತ್ರೆ ಚೀಟಿ ಬರೆಯುತ್ತ) ಈ ಮಾತ್ರೆ ತೆಗೆದುಕೋ ಸರಿಯಾಗುತ್ತದೆ.

(ಇನ್ನೊಂದು ಸಂದರ್ಭವನ್ನು ಮಕ್ಕಳೇ ಬರೆಯಬೇಕು.)

## ಯೋಜನೆ

- ನಿಮಗೆ ಗೊತ್ತಿರುವ ಪಕ್ಷಿಗಳ ಚಿತ್ರಗಳನ್ನು ಸಂಗ್ರಹಿಸಿ ಚಿತ್ರಸಂಪುಟ ತಯಾರಿಸಿರಿ.
- ಪರಿಸರ ಸಂರಕ್ಷಣೆಗೆ ನೀವು ಕೈಗೊಂಡ ಕಾರ್ಯಗಳನ್ನು ಪಟ್ಟಿ ಮಾಡಿರಿ.

## ಓದಿಗೆ ಮನ್ನಣೆ

- ಕೆ.ಎಸ್.ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಕವನ ಸಂಕಲನ ಓದಿರಿ.
- ಹೊರನಾಡ ಕನ್ನಡಿಗರು ಬರೆದ ಸಾಹಿತ್ಯ ಕೃತಿಗಳನ್ನು ಸಂಪಾದಿಸಿ ಓದಿರಿ.
- ಹನಿಗವನಗಳನ್ನು ಸಂಗ್ರಹಿಸಿ ಓದಿರಿ.

## ಶುಭ ನುಡಿ

- ನುಡಿಯಲು ಒಳ್ಳೆಯ ಮಾತುಗಳು ಇರುವಾಗ ಕೆಟ್ಟ ಮಾತುಗಳನ್ನು ಆಡುವುದೇಕೆ?
- ಆತ್ಮಶಕ್ತಿ ಇರುವವರನ್ನು ಯಾವ ದುಷ್ಟಶಕ್ತಿಯೂ ನಾಶಗೊಳಿಸಲಾರದು.
- ಗೌರವಕೊಟ್ಟು ಗೌರವ ಪಡೆಯೋಣ.



## ಗದ್ಯ ಪಾಠ-೮

# ಬೇರು




ಮೈಲಾರಲಿಂಗನ ಜಾತ್ರೆ. ಜನರೆಲ್ಲರೂ ಸಂಭ್ರಮದಿಂದ ಓಡಾಡುತ್ತಿದ್ದರು. ಆ ಸಂಭ್ರಮದ ನಡುವೆಯೂ ಗೌರಿ ಎಂಬ ಅನಾಥ ಬಾಲಕಿ ಒಂದೆಡೆ ಕುಳಿತು ಅಳುತ್ತಿದ್ದಳು. ವೃದ್ಧ ಗೊರವಯ್ಯನಿಗೆ ಆಕೆಯೊಬ್ಬ ಅನಾಥೆ ಎಂಬುದು ತಿಳಿಯಿತು. ಗೊರವಯ್ಯನಿಗೂ ಹಿಂದೆ-ಮುಂದೆ ಯಾರೂ ಇರಲಿಲ್ಲ. ಮಕ್ಕಳಿಲ್ಲದ ತನಗೆ ಗೌರಿ ಆಸರೆಯಾಗಬಹುದು ಎಂದು ಭಾವಿಸಿ ಅವಳನ್ನು 'ಮಗು, ನನ್ನೊಂದಿಗೆ ಬರುವೆಯಾ?' ಎಂದು ಕರೆದನು. ಗೌರಿ ಯೋಚಿಸಿ ಕೊನೆಗೂ ಒಪ್ಪಿದಳು. ಗೊರವಯ್ಯ ಗೌರಿಗೆ ತಿಲಕವಿಟ್ಟು, ಕರಡಿಯ ತಾಯತ ಕಟ್ಟಿ ಬೋಧನೆ ಮಾಡಿದನು.

'ನಾ ಯಾವತ್ತೂ ಸುಳ್ಳು ಏಳಾಕಿಲ್ಲ, ಕಳ್ಳತನ ಮಾಡಾಕಿಲ್ಲ; ತಂದ ಭಿಕ್ಷವ ಹಂಚಿಕಂಡು ತಿಂತೀನಿ.'

ಗೊರವಯ್ಯ ಹೇಳಿಕೊಟ್ಟಂತೆಯೇ ಗೌರಿ ಹೇಳಿದಳು. ಅನಂತರ ಗೊರವಯ್ಯ ಆಕೆಯನ್ನು ಕರೆದುಕೊಂಡು ತನ್ನ ಊರಿನತ್ತ ಹೆಜ್ಜೆ ಹಾಕಿದನು. ಕೆಲವು ಮೈಲುಗಳು ನಡೆದ ಬಳಿಕ ಗೊರವಯ್ಯನ ಮನೆ ಸಿಕ್ಕಿತು. ಅದು ಊರಿನಿಂದ ಸ್ವಲ್ಪ ಹೊರಗೆ ಹೊಲಗಳ ಮಧ್ಯೆ, ಒಂದು ಆಲದ ಮರದ ಕೆಳಗೆ ಇತ್ತು. ಮನೆ ಎಂದರೆ ಒಂದು

ಪುಟ್ಟ ಗುಡಿಸಲು, ಅಷ್ಟೇ. ಆದರೆ ಅದೇ ಅವನಿಗೆ ಸರ್ವಸ್ವ. ಗುಡಿಸಿಲಿನ ಒಳಗೆ ಗೋಡೆಯಲ್ಲಿದ್ದ ಗೂಟಕ್ಕೆ ತನ್ನ ಜೋಳಿಗೆಯನ್ನು ನೇತುಹಾಕಲು ಹೋದಾಗ ಗೊರವಯ್ಯನಿಗೆ ಗೋಡೆಯ ಕೆಳಭಾಗದಲ್ಲಿ ಸಣ್ಣ ಬಿರುಕು ಕಾಣಿಸಿತು. ಹೊರಗೆ ಬಂದು ನೋಡಿದಾಗ ಬದಿಯಲ್ಲಿದ್ದ ಆಲದಮರದ ಬೇರು ಗೋಡೆಗೆ ಇಳಿದು ಬಿರುಕು ಉಂಟಾಗಿರುವುದು ತಿಳಿಯಿತು. ಅದನ್ನು ಹೀಗೆಯೇ ಬಿಟ್ಟರೆ, ಕೆಲವೇ ದಿನಗಳಲ್ಲಿ ಬೇರು ಇನ್ನೂ ಆಳಕ್ಕಿಳಿದು, ಗುಡಿಸಲನ್ನೇ ಬೀಳಿಸುವ ಸಂಭವ ಇತ್ತು. ತನ್ನ ಪುಟ್ಟ ಮನೆಯನ್ನು ಉಳಿಸಿಕೊಳ್ಳಬೇಕಿದ್ದರೆ ಅವನು ಆ ಮರವನ್ನು ಕಡಿಯಲೇಬೇಕಿತ್ತು. ಆದರೆ ಸರ್ಕಾರದ ಲಿಖಿತ ಅನುಮತಿ ಇಲ್ಲದೆ ಮರವನ್ನು ಕಡಿಯುವಂತಿರಲಿಲ್ಲ.

ಗೊರವಯ್ಯ ಗೌರಿಯನ್ನೂ ಕರೆದುಕೊಂಡು ಸಂಬಂಧಪಟ್ಟ ಇಲಾಖೆಗೆ ಹೋದನು. ತನ್ನ ಸಮಸ್ಯೆ ಹೇಳಿ ಮರ ಕಡಿಯಲು ಅನುಮತಿ ಕೋರಿದನು. ಆದರೆ ಅಲ್ಲಿಯ ನೌಕರ ಅವನ ಅಹವಾಲಿಗೆ ತಕ್ಷಣ ಕಿವಿಗೊಡಲಿಲ್ಲ. 'ನೋಡೋಣ, ಸ್ವಲ್ಪ ದಿನ ಕಳೆದು ಬಾ' ಎಂದು ಹೇಳಿ ಸಾಗಹಾಕಿದನು. ಗೊರವಯ್ಯ ಆತನನ್ನು ಸಂಪ್ರೀತಗೊಳಿಸಲು ತೆಂಗಿನಕಾಯಿ, ತರಕಾರಿ ಇತ್ಯಾದಿ ವಸ್ತುಗಳನ್ನು ಕಾಣಿಕೆಯಾಗಿ ನೀಡಿದನು. ಆದರೆ ಅದೂ ಪ್ರಯೋಜನಕ್ಕೆ ಬರಲಿಲ್ಲ.

ಕೆಲ ದಿನಗಳಲ್ಲಿ ಆ ಕಛೇರಿಗೆ ಪ್ರಾಮಾಣಿಕ ಯುವ ಅಧಿಕಾರಿ ರಘುನಂದನ್ ವರ್ಗವಾಗಿ ಬಂದರು. ಗೊರವಯ್ಯ ಗೌರಿಯೊಂದಿಗೆ ಮನೆಮನೆಗೆ ಹೋಗುತ್ತಾ ಕೊನೆಗೆ ರಘುನಂದನರ ಮನೆಗೆ ಬಂದನು. ಅಲ್ಲಿ ಅವನ ಹೆಂಡತಿ ಸುಮಾ ಇದ್ದಳು. ಅವಳು ಗೊರವಯ್ಯನ ವೇಷ ನೋಡಿ ಅಚ್ಚರಿಪಟ್ಟಳು. ಆ ವೇಷದ ಹಿಂದಿನ ಕಾರಣ ಕೇಳಿದಳು. ಪರಶಿವನು ಭೂಲೋಕದಲ್ಲಿದ್ದ ದುಷ್ಟರಾದ ಮಣಿಮಲ್ಲರನ್ನು ಸಂಹರಿಸಲು ಆ ವೇಷ ಧರಿಸಿದ ಕತೆಯನ್ನು ಹೇಳಿದನು. ಸುಮ ಅವನ ಜೊತೆ ಇದ್ದ ಗೌರಿಯ ಬಗ್ಗೆ ವಿಚಾರಿಸಿದಾಗ ಗೊರವಯ್ಯ 'ಅವಳಿಗೆ ಅಪ್ಪ-ಅಮ್ಮ ಯಾರೂ ಇಲ್ಲ. ನಾನೇ ಎಲ್ಲಾ' ಎಂದನು. ಮಕ್ಕಳಿಲ್ಲದ ಸುಮಾಳಿಗೆ ಗೌರಿಯ ಮೇಲೆ ಒಂದು ರೀತಿಯ ಮಮಕಾರ ಉಂಟಾಯಿತು. ನಾಲ್ಕು ದಿನ ಅವಳನ್ನು ತನ್ನ ಮನೆಯಲ್ಲಿಯೇ ಉಳಿಸಿಕೊಂಡು ಅನಂತರ ಕಳುಹಿಸಿದಳು.

ಒಮ್ಮೆ ಮಂತ್ರಿಗಳು ಆ ಪ್ರದೇಶಕ್ಕೆ ಪ್ರವಾಸ ಬರುವವರಿದ್ದರು. ಅವರು ತಂಗಲು ಕರಡಿಗುಡ್ಡದ ಮೇಲಿರುವ ಪ್ರವಾಸಿಮಂದಿರವನ್ನು ಸಿದ್ಧಮಾಡಿ ಎಂದು ಮೇಲಧಿಕಾರಿಗಳಿಂದ ರಘುನಂದನರಿಗೆ ಆದೇಶ ಬಂತು. ರಘುನಂದನ್ ತಮ್ಮ ಕಛೇರಿಯ ವೆಂಕಟೇಶಯ್ಯನನ್ನು ಕರೆದು ಪ್ರವಾಸಿಮಂದಿರದ ಬಗ್ಗೆ ಮಾಹಿತಿ ಕೊಡಲು ತಿಳಿಸಿದರು. ಆದರೆ ಹಲವಾರು ವರ್ಷಗಳಿಂದ ಆ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದರೂ ವೆಂಕಟೇಶಯ್ಯ ಪ್ರವಾಸಿ ಮಂದಿರವನ್ನು ನೋಡಿಯೇ ಇರಲಿಲ್ಲ. ಅದೇ ದಿನ ಗೊರವಯ್ಯ ಬಂದು ಮರವನ್ನು ಕಡಿಯಲು ಮತ್ತೆ ಅನುಮತಿಯನ್ನು ಬೇಡಿದನು. ಚಿಂತೆಯಲ್ಲಿದ್ದ ವೆಂಕಟೇಶಯ್ಯ ಗೊರವಯ್ಯನಿಗೆ 'ಕಾಡಿನ ಮಧ್ಯೆ ಕರಡಿಗುಡ್ಡದ ಮೇಲೆ ನಮ್ಮ ಇಲಾಖೆಯ ಪ್ರವಾಸಿಮಂದಿರ ಇದೆ, ಅದು ಎಲ್ಲಿದೆ? ಎಂದು ನೀನು ಪತ್ತೆ ಹಚ್ಚಿದರೆ ಆಮೇಲೆ ಮರ ಕಡಿಯಲು ಅನುಮತಿ ಕೊಡುತ್ತೇನೆ' ಎಂದು ಆಸೆ ಹುಟ್ಟಿಸಿದನು. ಗೊರವಯ್ಯ ಗೌರಿಯೊಂದಿಗೆ ಕಾಡು-ಮೇಡು ಅಲೆದು, ಯಾವುದೋ ಹಳೇ ಕಟ್ಟಡ ಕಂಡು 'ಅದು ಬಿದ್ದು ಹೋಗುವ ಸ್ಥಿತಿಯಲ್ಲಿ ಇದೆ. ಅಲ್ಲಿ ಯಾರೂ ವಾಸಿಸುತ್ತಿಲ್ಲ' ಎಂಬ ವಿಚಾರವನ್ನು ವೆಂಕಟೇಶಯ್ಯನಿಗೆ ತಿಳಿಸಿದನು.

ಅದನ್ನು ಆಧರಿಸಿ ವೆಂಕಟೇಶಯ್ಯ ‘ಪ್ರವಾಸಿ ಮಂದಿರದಲ್ಲಿ ವ್ಯವಸ್ಥೆ ಸರಿ ಇಲ್ಲ, ಹಾಗಾಗಿ ಅಲ್ಲಿ ಮಂತ್ರಿಗಳನ್ನು ಉಳಿಸಲು ಸಾಧ್ಯವಿಲ್ಲ’ ಎಂದು ವರದಿಕೊಟ್ಟನು. ಗುಮಾಸ್ತನ ಮಾತನ್ನು ನಂಬಿದ ರಘುನಂದನ್ ಅದೇ ವರದಿಯನ್ನು ತನ್ನ ಮೇಲಧಿಕಾರಿಗಳಿಗೆ ಕಳುಹಿಸಿದರು. ‘ಆರು ತಿಂಗಳ ಹಿಂದಷ್ಟೇ ನವೀಕರಣಗೊಂಡ ಪ್ರವಾಸಿ ಮಂದಿರ ಇಷ್ಟು ಬೇಗ ಹಾಳಾಗಲು ಹೇಗೆ ಸಾಧ್ಯ?’ ಎಂದು ಮರುಪ್ರಶ್ನಿಸಿ ಮೇಲಿನಿಂದ ಪತ್ರ ಬಂತು.

ಅಂದು ವೆಂಕಟೇಶಯ್ಯ ಕಛೇರಿಗೆ ರಜೆ ಹಾಕಿದ್ದ. ರಘುನಂದನ್ ಪ್ರವಾಸಿ ಮಂದಿರಕ್ಕೆ ಸಂಬಂಧಿಸಿದ ಕಡತಗಳನ್ನು ತರಿಸಿಕೊಂಡು ತಾನೇ ಪರಿಶೀಲಿಸಿದರು. ಆಗ, ಅದಕ್ಕೊಬ್ಬ ಮೇಟಿ ಇರುವುದಾಗಿಯೂ ಅವನು ಪ್ರತಿ ತಿಂಗಳು ಸಂಬಳ ಪಡೆಯುತ್ತಿರುವುದಾಗಿಯೂ ತಿಳಿದುಬಂತು. ಆದರೆ ಮೇಟಿಯ ಮನೆ ಎಲ್ಲಿದೆ ಎಂದು ಕಛೇರಿಯಲ್ಲಿ ಯಾರಿಗೂ ಗೊತ್ತಿರಲಿಲ್ಲ. ಇವರನ್ನು ನಂಬಿ ಪ್ರಯೋಜನವಿಲ್ಲ ಎಂದು ತಾವೇ ಪ್ರವಾಸಿಮಂದಿರ ಹುಡುಕಿಕೊಂಡು ಹೋದರು. ಕಾಡು ಮೇಡು ಅಲೆದು, ಎಷ್ಟು ಗುಡ್ಡ ಹತ್ತಿ ಇಳಿದರೂ ಪ್ರವಾಸಿಮಂದಿರ ಮಾತ್ರ ಕಣ್ಣಿಗೆ ಬೀಳಲಿಲ್ಲ.




ಮಂತ್ರಿಗಳ ಪ್ರವಾಸದ ದಿನಾಂಕ ಹತ್ತಿರ ಬಂತು. ವೆಂಕಟೇಶಯ್ಯ ತನಗೆ ಜ್ವರ ಎಂದು ಸುಳ್ಳು ಹೇಳಿ ಕಛೇರಿಗೆ ಬರುವುದನ್ನೇ ನಿಲ್ಲಿಸಿದನು. ರಘುನಂದನ್ ಅವನ ಮನೆ ಹುಡುಕಿಕೊಂಡು ಹೋದರು. ಪ್ರವಾಸಿಮಂದಿರ ಮತ್ತು ಮೇಟಿಯ ಬಗ್ಗೆ ಗದರಿಸಿ ವಿಚಾರಿಸಿದರು. ‘ತಾನು ಇಲ್ಲಿಯವರೆಗೂ ಪ್ರವಾಸಿಮಂದಿರವನ್ನು ನೋಡಿಯೇ ಇಲ್ಲ, ಕೆಲವು ವರ್ಷಗಳಿಂದ ಮೇಟಿಯೂ ಬರುತ್ತಿಲ್ಲ. ಅವನ ಸಂಬಳ ಹಾಗೇ ಉಳಿದಿತ್ತು. ಸಾಂಸಾರಿಕ ತಾಪತ್ರಯ ಹೆಚ್ಚಾಗಿದ್ದುದರಿಂದ ಮೇಟಿಯ ಹೆಸರಿನಲ್ಲಿ ತಾನೇ ಸಹಿ ಹಾಕಿ ಆ ಸಂಬಳವನ್ನು ಬಳಸಿಕೊಳ್ಳುತ್ತಿದ್ದೆ’ ಎಂದು ವೆಂಕಟೇಶಯ್ಯ ಬಾಯಿಬಿಟ್ಟನು. ರಘುನಂದನ್ ಸಿಟ್ಟಿನಿಂದ ‘ನಿನ್ನನ್ನು ಕೆಲಸದಿಂದ ವಜಾ ಮಾಡುತ್ತೇನೆ’ ಎಂದು ಬೈದು ಮರಳಿದರು.

ಕೊನೆಗೆ ವೆಂಕಟೇಶಯ್ಯ ಹೇಗೋ ಕಷ್ಟಪಟ್ಟು ಮೇಟಿಯನ್ನು ಪತ್ತೆಹಚ್ಚಿ ರಘುನಂದನ್‌ರ ಮುಂದೆ ಕರೆತಂದು ನಿಲ್ಲಿಸಿದನು. ರಘುನಂದನ್ ಆತನನ್ನು 'ಪ್ರವಾಸಿಮಂದಿರ ಎಲ್ಲಿದೆ ತೋರಿಸು ನಡಿ?' ಎಂದು ಹೇಳಿದಾಗ ಅವನು 'ಪ್ರವಾಸಿಮಂದಿರವನ್ನೇ ಕಟ್ಟಿಲ್ಲ ಸ್ವಾಮಿ' ಎಂದು ಇಲ್ಲಿಯವರೆಗೆ ಮುಚ್ಚಿಟ್ಟಿದ್ದ ಗುಟ್ಟನ್ನು ಬಯಲು ಮಾಡಿದನು. ದಾಖಲೆಗಳಲ್ಲಿ ಮಾತ್ರ ಪ್ರವಾಸಿಮಂದಿರವನ್ನು ಕಟ್ಟಿದೆ ಎಂದು ನಮೂದಿಸಲಾಗಿತ್ತು. ಕಳೆದ ಐವತ್ತು ವರ್ಷಗಳಲ್ಲಿ ಬಂದು ಹೋದ ಪ್ರತಿ ಅಧಿಕಾರಿಯೂ ಇದರ ದುರುಪಯೋಗ ಪಡೆದು, ಆ ಸಂಬಂಧವಾಗಿ ಬರುತ್ತಿದ್ದ ಅಷ್ಟೂ ಹಣವನ್ನು ಲಪಟಾಯಿಸಿದ್ದರು. ಈ ಭ್ರಷ್ಟಾಚಾರದ ಪ್ರಕರಣವನ್ನು ಸರ್ಕಾರದ ಗಮನಕ್ಕೆ ತರಲು ರಘುನಂದನ್ ನಿರ್ಧರಿಸಿದರು.

ಈ ಮಧ್ಯೆ ಗೊರವಯ್ಯನ ಗುಡಿಸಲಿನಲ್ಲಿ ಬಿರುಕು ದೊಡ್ಡದಾಗುತ್ತಾ ಹೋಯಿತು. ಅವನ ಭಯವೂ ಜಾಸ್ತಿಯಾಯಿತು. ಮರ ಕಡಿಯಲು ಅನುಮತಿ ದೊರೆಯಬಹುದು ಎಂಬ ಭರವಸೆಯಿಂದ ಗೋಡೆ ಬೀಳದಂತೆ ಬಿರುಕಿಗೆ ಮಣ್ಣು ಮೆತ್ತಿದನು. ಮರ ಕಡಿಯಲು ಅವರು ಯಾಕೆ ಒಪ್ಪಿಗೆ ಕೊಡುತ್ತಿಲ್ಲ ಎಂಬ ಗೌರಿಯ ಪ್ರಶ್ನೆಗೆ ಗೊರವಯ್ಯನ ಬಳಿಯಲ್ಲಿ ಉತ್ತರವಿರಲಿಲ್ಲ. ತನ್ನ ಮನೆ ಉಳಿಸಿಕೊಳ್ಳಲು ಸರ್ಕಾರಿ ಕಛೇರಿಗೆ ಅಲೆದೂ ಅಲೆದೂ ಗೊರವಯ್ಯ ಹಣ್ಣಾಗಿದ್ದ. ಆತನ ಈ ಸಮಸ್ಯೆ ರಘುನಂದನರ ಗಮನಕ್ಕೆ ಕೊನೆಗೂ ಬರಲೇ ಇಲ್ಲ. ಅಷ್ಟರಲ್ಲಿ ಮಳೆಗಾಲ ಪ್ರಾರಂಭವಾಯಿತು. ಅಂದಿನ ಜೋರು ಗಾಳಿ-ಮಳೆಗೆ ಗೊರವಯ್ಯನ ಗುಡಿಸಲು ಕುಸಿದು ಬಿದ್ದಿತು. ಅದರ ಅವಶೇಷಗಳ ಅಡಿಗೆ ಸಿಕ್ಕಿದ ಗೊರವಯ್ಯ ವಿಪರೀತ ಗಾಯಗೊಂಡನು. ಗೌರಿಗೂ ಸಣ್ಣ ಪುಟ್ಟ ಗಾಯಗಳಾದವು. ಅವಳಂತೂ ಗೊರವಯ್ಯನ ಬಳಿ ಕುಳಿತು ಒಂದೇ ಸಮನೆ ಅಳತೊಡಗಿದಳು. ವಿಷಯ ತಿಳಿದು ಅಲ್ಲಿಗೆ ಬಂದ ರಘುನಂದನರ ಮನಸ್ಸು ಕಲಕಿ ಹೋಯಿತು. ಗೊರವಯ್ಯನನ್ನು ಆಸ್ಪತ್ರೆಗೆ ಸಾಗಿಸಲು ಏರ್ಪಾಡು ಮಾಡುವುದಾಗಿ ಹೇಳಿದರು. ಆಕೆಯನ್ನು ಶಾಲೆಗೆ ಸೇರಿಸುವುದಾಗಿಯೂ ಹೇಳಿದರು. ಬಳಿಕ ಗೌರಿಯ ಕೈ ಹಿಡಿದು ಎಬ್ಬಿಸಿ ತನ್ನೊಂದಿಗೆ ಬರುವಂತೆ ಕರೆದರು. ಗೌರಿ ಅಲ್ಲಿದ್ದ ಅಧಿಕಾರಿಗಳ ಕಡೆಗೆ ತಿರುಗಿಯೂ ನೋಡಲಿಲ್ಲ. ಗೊರವಯ್ಯನ ಗಾಯಗೊಂಡ ದೇಹವನ್ನೇ ದಿಟ್ಟಿಸಿ ನೋಡಿದಳು. ಆತ ತನಗೆ ಬೋಧಿಸಿದ ಮಾತುಗಳು ಅವಳ ಕಿವಿಯಲ್ಲಿ ಅನುರಣಿಸಿದವು;

'ನಾ ಯಾವತ್ತೂ ಸುಳ್ಳು ಏಳಾಕಿಲ್ಲ, ಕಳ್ಳತನ ಮಾಡಾಕಿಲ್ಲ; ತಂದ ಭಿಕ್ಷವ ಹಂಚಿಕಂಡು ತಿಂತೀನಿ.'

ಭ್ರಷ್ಟಾಚಾರದ ಬೇರುಗಳು ಆಳವಾಗಿ ಹೊಕ್ಕಿರುವ ಸಮಾಜದ ಬಗ್ಗೆ ಪುಟ್ಟ ಗೌರಿಯಲ್ಲಿ ತಾತ್ಸಾರ ಭಾವ ಮೂಡಿತ್ತು. ತಾನು ಗೊರವಯ್ಯ ಹಾಕಿ ಕೊಟ್ಟ ಸತ್ಯ, ಪ್ರಾಮಾಣಿಕತೆಯ ಮಾರ್ಗದಲ್ಲಿಯೇ ನಡೆಯಬೇಕು, ಈ ಅಪ್ರಾಮಾಣಿಕರೊಂದಿಗೆ ಇರಬಾರದು ಎಂದು ಆಕೆ ನಿರ್ಧರಿಸಿದಳು. ಅಲ್ಲಿಯೇ ಬದಿಯಲ್ಲಿ ಬಿದ್ದಿದ್ದ ಗೊರವಯ್ಯನ ಕರಡಿಟೊಪ್ಪಿಗೆ, ಜೋಳಿಗೆ, ಕೊಳಲುಗಳನ್ನು ಕೈಗೆತ್ತಿಕೊಂಡಳು. ಕಷ್ಟಪಟ್ಟು ಗೊರವಯ್ಯನನ್ನು ಎಬ್ಬಿಸಿ ನಿಲ್ಲಿಸಿದಳು. ಒಂದೊಂದೆ ಹೆಜ್ಜೆ ಇರಿಸಿದಳು. ರಘುನಂದನ್ 'ಗೌರೀ..........' ಎಂದು ಮತ್ತೊಮ್ಮೆ ಕರೆದರು.

ಗೌರಿ ಅಲ್ಲಿದ್ದ ಅಧಿಕಾರಿಗಳ ಕಡೆಗೆ ಕ್ರೂರ ದೃಷ್ಟಿ ಬೀರಿ, ಜೋರಾಗಿ 'ತುಪ್'ಎಂದು ಉಗಿದು ಗೊರವಯ್ಯನನ್ನು ಎಳೆದುಕೊಂಡು ಮುಂದಕ್ಕೆ... ಮುಂದಕ್ಕೆ.. ನಡೆದಳು.

ಗೊರವಯ್ಯನ ಗುಡಿಸಲು ಮಾತ್ರ ಮೂಕವಾಗಿ ರೋದಿಸುತ್ತ ಅನಾಥವಾಗಿ ಬಿದ್ದುಕೊಂಡಿತ್ತು.

-ಪಿ. ಶೇಷಾದ್ರಿ

**ಕ್ಷೇತ್ರ** : ಮಾತನಾಡುವುದು

**ಸಾಮರ್ಥ್ಯ** : ಕೊಟ್ಟಿರುವ ವಿಷಯದ ಕುರಿತು ನಿರರ್ಗಳವಾಗಿ ಚರ್ಚಿಸುವುದು.

**ಆಶಯ :**

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಅನಂತರ ಭಾರತ ರಾಮರಾಜ್ಯ ಆಗಬೇಕೆಂದು ಮಹಾತ್ಮ ಗಾಂಧೀಜಿಯವರು ಕನಸು ಕಾಣುತ್ತಿದ್ದರು. ಆದರೆ ಇಂದು ನಮ್ಮ ಸಮಾಜದಲ್ಲಿ ಎಲ್ಲ ಕ್ಷೇತ್ರಗಳಲ್ಲಿ ಒಂದಲ್ಲಾ ಒಂದು ರೀತಿಯ ಭ್ರಷ್ಟಾಚಾರ ನಡೆಯುತ್ತಲೆ ಇದೆ. ಗ್ರಾಮೀಣ ಜನರಿಗಂತೂ ಜೀವನ ನಡೆಸುವುದು ದುಸ್ತರವಾಗುತ್ತಿದೆ. ಭ್ರಷ್ಟಾಚಾರದ ಬಗ್ಗೆ ವಿದ್ಯಾವಂತ/ ಅವಿದ್ಯಾವಂತರೆನ್ನದೆ ಎಲ್ಲರಲ್ಲಿಯೂ ಜಾಗೃತಿ ಮೂಡಬೇಕಾಗಿದೆ. ಒಂದು ಚಿಕ್ಕ ಸನ್ನಿವೇಶದ ಮೂಲಕ ಭ್ರಷ್ಟಾಚಾರದ ನೆರಳನ್ನು ಪರಿಚಯಿಸುವ ಪ್ರಯತ್ನವನ್ನು ಈ ಗದ್ಯದಲ್ಲಿ ಮಾಡಲಾಗಿದೆ.

**ಕವಿ ಕೃತಿ ಪರಿಚಯ:**



'ಬೇರು' ಗದ್ಯವನ್ನು ಬರೆದವರು **ಪಿ.ಶೇಷಾದ್ರಿ.** ಇವರು ತುಮಕೂರು ಜಿಲ್ಲೆಯ ದಂಡಿನಶಿವರ ಎಂಬ ಊರಿನಲ್ಲಿ ೨೩-೧೧-೧೯೬೩ರಂದು ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ೧೯೮೭ನೆಯ ಇಸವಿಯಲ್ಲಿ ಬೆಂಗಳೂರಿಗೆ ಬಂದು ಚಿತ್ರ ಕಲಾವಿದ ಹಾಗೂ ಪತ್ರಕರ್ತರಾಗಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ೧೯೯೦ನೆಯ ಇಸವಿಯಲ್ಲಿ ಕಥೆ, ಚಿತ್ರಕಥೆ, ಸಂಭಾಷಣಾಕಾರರಾಗಿ ಚಿತ್ರರಂಗ ಪ್ರವೇಶಿಸಿದರು. ಇವರು ಕಲಾತ್ಮಕ ಚಲನಚಿತ್ರಗಳನ್ನು ನಿರ್ದೇಶಿಸಿ ಆರು ಬಾರಿ ರಾಷ್ಟ್ರ ಪ್ರಶಸ್ತಿಗಳಿಸಿದ್ದಾರೆ. ಮುನ್ನುಡಿ, ಅತಿಥಿ, ಬೇರು, ತುತ್ತೂರಿ, ವಿಮುಕ್ತಿ ಹಾಗೂ ಬೆಟ್ಟದಜೀವ ಇವೇ ಆ ಆರು ಚಲನಚಿತ್ರಗಳು. ಪ್ರಮುಖ ದಿನಪತ್ರಿಕೆಯ ಅಂಕಣಕಾರರೂ ಆಗಿದ್ದ ಶ್ರೀಯುತರು ನಿರ್ದೇಶಿಸಿದ 'ಬೇರು' ಚಲನ ಚಿತ್ರದ ಕಥೆಯ ಸರಳೀಕೃತ ರೂಪವಿದು.



**ಅರ್ಥ ತಿಳಿಯಿರಿ :**

ತಿಲಕ–ಹಣೆಯ ಮೇಲೆ ಇಟ್ಟುಕೊಳ್ಳುವ ಬೊಟ್ಟು. ಅನುಮತಿ–ಒಪ್ಪಿಗೆ, ಸಮ್ಮತಿ. ಅಹವಾಲು–ಪ್ರಾರ್ಥನೆ, ಬೇಡಿಕೆ. ಸಂಪ್ರೀತ–ಸಂತೋಷ. ಮಮಕಾರ–ನನ್ನದೆಂಬ ಭಾವನೆ, ಪ್ರೀತಿ, ವಾತ್ಸಲ್ಯ. ನವೀಕರಣ–ಹಳೆಯದನ್ನು ಹೊಸತು ಮಾಡುವುದು. ಲಪಟಾಯಿಸು–ದೋಚು. ಭ್ರಷ್ಟಾಚಾರ– ದುರಾಚಾರ, ಲಂಚ ತಿನ್ನುವುದು, ಲಂಚಗುಳಿತನ. ಭರವಸೆ–ನಂಬಿಕೆ, ವಿಶ್ವಾಸ, ಆಶ್ವಾಸನೆ. ಅವಶೇಷ–ಉಳಿಕೆ, ಬಾಕಿ. ಕಲಕು–ಕದಡು, ಮಿಡಿಯು. ತಾತ್ಸಾರ–ತಿರಸ್ಕಾರ, ಅವಗಣನೆ.

ವಿವರ ತಿಳಿಯಿರಿ :

| | | |
|---|---|---|
| ಗೊರವಯ್ಯ | : | ಮೈಲಾರಲಿಂಗನ ಭಕ್ತ. |
| ಜೋಳಿಗೆ | : | ಚೌಕವಾದ ಬಟ್ಟೆಯ ನಾಲ್ಕು ಮೂಲೆಗಳನ್ನು ಸೇರಿಸಿ ಮಾಡಿದ ಚೀಲ, ಭಿಕ್ಷೆಯ ಚೀಲ. |
| ಮೇಟಿ | : | ಪ್ರವಾಸಿ ಮಂದಿರದ ಮುಖ್ಯ ಸೇವಕ. |
| ಸಾಗಹಾಕು | : | ಹೇಗಾದರೂ ಮಾಡಿ ತನ್ನ ಎದುರಿನಿಂದ ದೂರಕಳುಹಿಸುವುದು. |
| ಪ್ರಾಮಾಣಿಕ | : | ನಂಬಿಕೆಗೆ ಅರ್ಹನಾದವನು, ಸತ್ಯವಂತ, ನಿಯತ್ತಿನ ಮನುಷ್ಯ. |
| ಪ್ರವಾಸಿ ಮಂದಿರ | : | ಯಾತ್ರಿಕರು ಉಳಿದುಕೊಳ್ಳಲು ಮಾಡಿರುವ ವಸತಿ ಗೃಹ. |
| ಮಣಿಮಲ್ಲರು | : | ದುಷ್ಟರಾದ ರಾಕ್ಷಸರು. |
| ಕಡತ | : | ಒಂದು ವಿಷಯಕ್ಕೆ ಸಂಬಂಧಿಸಿದ ಕಾಗದ ಪತ್ರಗಳ ಸಂಗ್ರಹ. |
| ಲಿಖಿತ ಅನುಮತಿ | : | ಬರೆದುಕೊಟ್ಟ ಅಪ್ಪಣೆ ಪತ್ರ. |

## ವ್ಯಾಕರಣ ಮಾಹಿತಿ

### ಸಂಸ್ಕೃತ ಸಂಧಿಗಳು



**ವೃದ್ಧಿಸಂಧಿ :** ಅ ಆ ಕಾರಗಳ ಮುಂದೆ ಏ ಐ ಕಾರಗಳು ಪರವಾದರೆ ಅವೆರಡರ ಸ್ಥಾನದಲ್ಲಿ ಐ ಕಾರವೂ ಓ ಔ ಕಾರಗಳು ಪರವಾದರೆ ಅವೆರಡರ ಸ್ಥಾನದಲ್ಲಿ ಔ ಕಾರವು ಆದೇಶಗಳಾಗಿ ಬಂದರೆ ಅದಕ್ಕೆ ವೃದ್ಧಿ ಸಂಧಿ ಎನ್ನುವರು.
ಉದಾ: ಏಕ + ಏಕ = ಐಕ್ಯಕ [ಅ + ಏ = ಐ]

- ಶಿವ + ಐಕ್ಯ = ಶಿವೈಕ್ಯ [ಅ + ಐ = ಐ]
- ವನ + ಓಷಧ = ವನೌಷಧ [ಅ + ಓ = ಔ]
- ಮಹಾ + ಔದಾರ್ಯ = ಮಹೌದಾರ್ಯ [ಆ + ಔ = ಔ]

**ಯಣ್ ಸಂಧಿ :** ಇ, ಈ, ಉ, ಊ, ಋ ಕಾರಗಳಿಗೆ ಸವರ್ಣವಲ್ಲದ ಸ್ವರ ಪರವಾದರೆ ಇ, ಈ ಕಾರಗಳಿಗೆ 'ಯ್' ಕಾರವೂ, ಉ,ಊ ಕಾರಗಳಿಗೆ 'ವ್' ಕಾರವೂ 'ಋ' ಕಾರಕ್ಕೆ 'ರ್' ಕಾರವೂ ಆದೇಶಗಳಾಗಿ ಬಂದರೆ ಅವನ್ನು ಯಣ್ ಸಂಧಿ ಎಂದು ಕರೆಯುವರು.

ಉದಾ:

- ಇತಿ + ಆದಿ = ಇತ್ಯಾದಿ [ಇ + ಆ = ಯಾ]
- ಜಾತಿ + ಅತೀತ = ಜಾತ್ಯತೀತ [ಇ + ಅ = ಯ]
- ಪ್ರತಿ + ಉಪಕಾರ = ಪ್ರತ್ಯುಪಕಾರ [ಇ + ಉ = ಯ]

➤ ಮನು + ಅಂತರ = ಮನ್ವಂತರ [ಉ + ಅ = ವ]
➤ ಗುರು + ಆಜ್ಞೆ = ಗುರ್ವಾಜ್ಞೆ [ಉ + ಆ = ವಾ]
➤ ಪಿತೃ + ಆರ್ಜಿತ = ಪಿತ್ರಾರ್ಜಿತ [ಋ + ಆ = ರ]

## ಅಭ್ಯಾಸಗಳು

### ಅ. ವಿರುದ್ಧಾರ್ಥಕ ಪದ ಬರೆಯಿರಿ.

೧. ಸಂಭವ ೨. ವ್ಯವಸ್ಥೆ ೩. ಲಿಖಿತ ೪. ಉಪಯೋಗ ೫. ಪ್ರಾಮಾಣಿಕ ೬. ಸತ್ಯ

### ಆ. ಈ ಪದಗಳಿಗೆ ಜೋಡಿಪದ ಬರೆಯಿರಿ.

೧. ಹಿಂದೆ– ೨. ಕಾಡು– ೩. ಗಾಳಿ– ೪. ಸಣ್ಣ– ೫. ಬೆಟ್ಟ–

### ಇ. ಖಾಲಿಬಿಟ್ಟ ಸ್ಥಳಗಳಲ್ಲಿ ಸೂಕ್ತ ಪದ ಬರೆಯಿರಿ.

೧. ಗೊರವಯ್ಯ ಗೌರಿಗೆ ತಿಲಕವಿಟ್ಟು, ____________ ಕಟ್ಟಿ ಬೋಧನೆ ಮಾಡಿದನು.
೨. ಸರ್ಕಾರದ __________ಅನುಮತಿ ಇಲ್ಲದೆ ಮರವನ್ನು ಕಡಿಯುವಂತಿರಲಿಲ್ಲ.
೩. ಒಮ್ಮೆ ಮಂತ್ರಿಗಳು ಆ ಪ್ರದೇಶಕ್ಕೆ ________ ಬರುವವರಿದ್ದರು.
೪. ದಾಖಲೆಗಳಲ್ಲಿ ಮಾತ್ರ _______ ಕಟ್ಟಿದೆ ಎಂದು ನಮೂದಿಸಲಾಗಿತ್ತು.
೫. ತನ್ನ ಮನೆ ಉಳಿಸಿಕೊಳ್ಳಲು ಸರ್ಕಾರಿ ಕಛೇರಿಗೆ ಅಲೆದೂ ಅಲೆದೂ ಗೊರವಯ್ಯ ___________

### ಈ. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಗೌರಿ ಎಂಬ ಬಾಲಕಿ ಎಲ್ಲಿ ಅಳುತ್ತ ಕುಳಿತಿದ್ದಳು?
೨. ಗೊರವಯ್ಯ ಗೌರಿಗೆ ತಾಯತ ಕಟ್ಟಿ ಏನೆಂದು ಬೋಧನೆ ಮಾಡಿದನು?
೩. ಗೊರವಯ್ಯ ಗುಮಾಸ್ತನನ್ನು ಸಂಪ್ರೀತಗೊಳಿಸಲು ಏನೇನು ನೀಡಿದನು?
೪. ಕಛೇರಿಗೆ ವರ್ಗವಾಗಿ ಬಂದ ಯುವ ಅಧಿಕಾರಿಯ ಹೆಸರೇನು?
೫. ಗೊರವಯ್ಯನ ಗುಡಿಸಲು ಬಿದ್ದು ಹೋಗಲು ಕಾರಣವೇನು?

### ಉ. ಈ ಮಾತುಗಳ ಸಂದರ್ಭವನ್ನು ವಿವರಿಸಿರಿ.

೧. "ನನ್ನೊಂದಿಗೆ ಬರುವೆಯಾ?"
೨. "ನೋಡೋಣ ಸ್ವಲ್ಪ ದಿನ ಕಳೆದು ಬಾ"
೩. "ಅವಳಿಗೆ ಅಪ್ಪ ಅಮ್ಮ ಯಾರೂ ಇಲ್ಲ. ನಾನೇ ಎಲ್ಲಾ"
೪. "ಪ್ರವಾಸಿ ಮಂದಿರವನ್ನೇ ಕಟ್ಟಿಲ್ಲ ಸ್ವಾಮಿ"

## ಊ. ಪ್ರಶ್ನೆಗಳಿಗೆ ಐದು/ಆರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ರಘುನಂದನ್ ಪ್ರವಾಸಿ ಮಂದಿರದ ಬಗ್ಗೆ ಗದರಿಸಿ ಪ್ರಶ್ನಿಸಿದಾಗ ವೆಂಕಟೇಶಯ್ಯ ಕೊಟ್ಟ ಉತ್ತರವೇನು?

೨. ಗೌರಿ ಅಧಿಕಾರಿಗಳ ಕಡೆಗೆ ಕ್ರೂರದೃಷ್ಟಿ ಬೀರಿ ನಡೆಯಲು ಕಾರಣವೇನು? ವಿವರಿಸಿರಿ.

## ಋ. ಈ ಪದಗಳನ್ನು ಕೂಡಿಸಿ ಸಂಧಿ ಹೆಸರು ಬರೆಯಿರಿ.

೧. ಅತಿ+ಉತ್ತಮ=  ೨) ಏಕ+ಏಕ=  ೩)ರಥ+ಉತ್ಸವ=  ೪)ಸರ್ವ+ಅಸ್ತ್ರ=

## ಎ. ಸಂಧಿಪದಗಳನ್ನು ಉದಾಹರಣೆಗಳಿಗೆ ಹೊಂದಿಸಿ ಬರೆಯಿರಿ.

| | |
|---|---|
| ೧. ಸವರ್ಣದೀರ್ಘ ಸಂಧಿ | ಮಹೌನ್ನತ್ಯ |
| ೨. ಗುಣಸಂಧಿ | ಅತ್ಯಂತ |
| ೩. ವೃದ್ಧಿಸಂಧಿ | ಗಿರೀಶ |
| ೪. ಯಣ್‌ಸಂಧಿ | ದೇವೇಂದ್ರ |

## ಏ. ಈ ವಿಷಯಗಳನ್ನು ಕುರಿತು ಅಭಿಪ್ರಾಯ ಅನಿಸಿಕೆಗಳನ್ನು ಕುರಿತು ಸಂಕ್ಷಿಪ್ತವಾಗಿ ಬರೆಯಿರಿ.

೧. ಸಮಾಜವನ್ನು ಮುನ್ನಡೆಸಲು ಸಮರ್ಥ ನಾಯಕರು ಬೇಕೇಬೇಕು

೨. ಭ್ರಷ್ಟಾಚಾರಿಗಳು ದೇಶದ್ರೋಹಿಗಳು

## ಭಾಷಾ ಆಟಗಳು

**೧. ಕಥೆ ಕಟ್ಟೋಣ:** ತರಗತಿಯಲ್ಲಿ ಮೊದಲು ಒಬ್ಬ ವಿದ್ಯಾರ್ಥಿ ಒಂದು ವಾಕ್ಯ ಹೇಳಿ ಕಥೆ ಹೇಳಲು ಪ್ರಾರಂಭಿಸಬೇಕು. ಅನಂತರ ಆ ವಾಕ್ಯಕ್ಕೆ ಪೂರಕವಾಗಿ ಮತ್ತೊಂದು ವಾಕ್ಯವನ್ನು ಇನ್ನೊಬ್ಬ ವಿದ್ಯಾರ್ಥಿ ಹೇಳುತ್ತಾ ಕಥೆ ಮುಂದುವರೆಸಬೇಕು. ಹೀಗೆ ತರಗತಿಯಲ್ಲಿರುವ ಎಲ್ಲಾ ಮಕ್ಕಳು ಭಾಗವಹಿಸುತ್ತಾ ಇಡಿಯಾದ ಒಂದು ಕಥೆ ಬರುವ ಹಾಗೆ ಪೂರ್ಣಗೊಳಿಸಬೇಕು.

## ಯೋಜನೆ

- ಸ್ಥಳೀಯ ನಗರಸಭೆ/ ಪುರಸಭೆ /ಗ್ರಾಮಪಂಚಾಯಿತಿಗೆ ಭೇಟಿ ನೀಡಿ ಅಲ್ಲಿನ ಆಡಳಿತ ವ್ಯವಸ್ಥೆ ಬಗ್ಗೆ ಮಾಹಿತಿ ಸಂಗ್ರಹಿಸಿ ವರದಿ ತಯಾರಿಸಿರಿ.
- ನಿಮ್ಮ ಶಾಲಾ ಮಂತ್ರಿಮಂಡಲದ ಸದಸ್ಯರ ಹೆಸರು ಬರೆದು ಅವರ ಕರ್ತವ್ಯಗಳನ್ನು ಸಂಕ್ಷಿಪ್ತವಾಗಿ ಬರೆಯಿರಿ.

## ಓದಿಗೆ ಮನ್ನಣೆ :

೧. ಪಿ.ಶೇಷಾದ್ರಿಯವರು ನಿರ್ದೇಶಿಸಿರುವ 'ಬೇರು' ಚಲನಚಿತ್ರ ನೋಡಿರಿ.

೨. ಗಾಂಧೀಜಿಯವರ ಜೀವನ ಚರಿತ್ರೆ ಓದಿರಿ.

೩. ಭ್ರಷ್ಟಾಚಾರದ ವಿರುದ್ಧ ಚಳುವಳಿ ನಡೆಸುವವರ ಬಗ್ಗೆ ಕೇಳಿ ತಿಳಿದುಕೊಳ್ಳಿರಿ.

**ಶುಭ ನುಡಿ :**

೧. ಅಶಕ್ತರ ಬಗ್ಗೆ ಕರುಣೆಯಿರಲಿ, ಅವರಿಗೆ ಸಹಾಯ ಮಾಡೋಣ.

೨. ನಮ್ಮ ಕೆಲಸಕಾರ್ಯಗಳಲ್ಲಿ ನಿಷ್ಠೆ ತೋರಿಸೋಣ.

೩. ಭ್ರಷ್ಟಾಚಾರ ಕಂಡುಬಂದಾಗ ಅದನ್ನು ವಿರೋಧಿಸೋಣ.



**ಪೂರಕ ಪಾಠ –**

# ಅವ್ವ

ಬೊಗಸೆ ತುಂಬ ಹೂವ ತಂದು
ಪಾದಕಮಲಕೆರಗುವೆ
ನಿನ್ನ ಅಡಿಗೆ ಮಣಿದು ಮತ್ತೆ
ಭಾಗ್ಯವನ್ನೆ ಬೇಡುವೆ ॥೧॥

ಗರ್ಭದಲ್ಲಿ ಮಾಂಸ ಮುದ್ದೆ
ಅ ಆ ಇ ಈ ತಿಳಿಯದು.
ಜನಿಸಿ ಧರೆಗೆ ಬಿದ್ದ ಕ್ಷಣವೆ
'ಅವ್ವ' ಅಂತು ಕೊರಳು ॥೨॥

ನೋವ ನುಂಗಿ ನನ್ನ ನಂಬಿ
ಹಾಲ ನೀನು ಕುಡಿಸಿದೆ
ಕಣ್ಣ ನೀರ ಒರೆಸಿ ನೀನು
ಎದೆಗವಚಿ ರಮಿಸಿದೆ ॥೩॥

ಬಿದ್ದರಂತು ಓಡಿಬಂದು
ಎತ್ತಿಕೊಂಡು ರಮಿಸಿದೆ.
ಗೆದ್ದರಂತು ಖುಷಿಯು ನಿನಗೆ
ಹೊತ್ತುಕೊಂಡು ಸಾರಿದೆ ॥೪॥

ವಿದ್ಯೆ ಕಲಿಸಿ ಬುದ್ಧಿನೀಡಿ
ಸಿದ್ಧಿಪಡೆಯೆ ಕಲಿಸಿದೆ
ಯಶದ ಹಿಂದೆ ಹರಕೆ ನೀಡಿ
ಜೀವತ್ಯಾಗ ಮಾಡಿದೆ ॥೫॥



ರೊಕ್ಕಕೆಲ್ಲ ಲೆಕ್ಕವಿಲ್ಲ
ನಿನ್ನ ಋಣ ಅಗಣಿತ.
ಪಾದಕಮಲಕೊಂದೆ ಹೂವು
ನನ್ನ ಪ್ರೀತಿ ಸೀಮಿತ ॥೬॥

ತಾಯಿ ಹರಕೆ ಮುಂದೆ ಜಗದಿ
ಯಾವುದಿಲ್ಲ ಮಿಗಿಲು ತಾನು
ಕಾಯೊ ಗುಣದ ದೇವರವ್ವ
ಅವ್ವ ನಿನ್ನ ಹೆಸರು ॥೭॥

–ಲಲಿತಾ. ಕೆ. ಹೊಸಪ್ಯಾಟಿ

**I. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ :**

೧. ಕವಯಿತ್ರಿಯು ತಾಯಿಯ ಪಾದಕ್ಕೆ ಏನು ತರುತ್ತಾಳೆ?

೨. ಜಗತ್ತಿನಲ್ಲಿ ಮಿಗಿಲಾದುದು ಯಾವುದು?

೩. ತಾಯಿ ಮಗುವಿಗೆ ಏನನ್ನು ಕಲಿಸುತ್ತಾಳೆ?

೪. ಮಗು ಬಿದ್ದಾಗ ತಾಯಿ ಹೇಗೆ ರಮಿಸುತ್ತಾಳೆ?

೫. ತಾಯಿ ಮಗುವಿಗೆ ಏನನ್ನು ಕುಡಿಸುತ್ತಾಳೆ?

# ಪದ ಖಜಾನೆ–೧

## ಅ

ಅಂಗಳ=ಬಯಲು, ವಿಶಾಲವಾದ ಮನೆಯ ಮುಂಭಾಗ

ಅಂತಃಕರಣ=ಮನಸ್ಸು. ಕನಿಕರ

ಅಂತಃಪುರ=ರಾಣಿವಾಸ

ಅಗಣಿತ=ಲೆಕ್ಕವಿಲ್ಲದ

ಅಗ್ನಿ=ಬೆಂಕಿ

ಅಡ್ಡಿ=ವಿಘ್ನ, ತೊಂದರೆ

ಅದ್ಭುತ=ಅತ್ಯಾಶ್ಚರ್ಯಕರ, ಪವಾಡ

ಅನತಿದೂರ=ಹತ್ತಿರ, ಸ್ವಲ್ಪವೇ ದೂರ

ಅನಿವಾರ್ಯ=ತಪ್ಪಿಸಲಾಗದ, ನಿವಾರಿಸಲಾಗದ

ಅನುಗುಣ=ಹೊಂದಿಕೊಂಡ,ಅನುಸರಿಸುವ ಗುಣವುಳ್ಳ

ಅಪರಾಧಿ=ತಪ್ಪಿತಸ್ಥ, ತಪ್ಪು ಮಾಡಿದವನು

ಅಪಾರ=ಮಿತಿಯಿಲ್ಲದ, ಕೊನೆಯಿಲ್ಲದ

ಅಪೇಕ್ಷಿಸು=ಬಯಸು, ಇಚ್ಛಿಸು, ಕೋರು

ಅಭಿರುಚಿ=ಆಸಕ್ತಿ, ಒಲವು

ಅಭಿವೃದ್ಧಿ=ಏಳಿಗೆ, ಬೆಳವಣಿಗೆ

ಅಮರ=ಸಾವಿಲ್ಲದ, ಶಾಶ್ವತವಾದ, ದೇವತೆ

ಅಮಾವಾಸ್ಯೆ=ಕೃಷ್ಣಪಕ್ಷದ ಕೊನೆಯ ದಿನ

ಅರಳೆ= ಬೀಜ ಬೇರ್ಪಡಿಸಿದ ಹತ್ತಿ

ಅಹವಾಲು=ಪ್ರಾರ್ಥನೆ, ಬೇಡಿಕೆ

ಅಳಿ=ನಾಶಹೊಂದು, ದುಂಬಿ

## ಆ

ಆಕರ=ಮೂಲ, ಉತ್ಪತ್ತಿಸ್ಥಾನ

ಆಕಸ್ಮಿಕ=ಅನಿರೀಕ್ಷಿತ, ಇದ್ದಕ್ಕಿದ್ದ ಹಾಗೆ

ಆಗಸ(ದ್ಭ)=ಆಕಾಶ(ಸಂ), ಗಗನ, ಅಂತರಿಕ್ಷ

ಆತ್ಮಶಾಂತಿ=ಮನಸ್ಸಿನ ನೆಮ್ಮದಿ

ಆತ್ಮೀಯ=ತನ್ನವನೇ ಆದ

ಆದೇಶ=ಆಜ್ಞೆ, ಅಪ್ಪಣೆ

ಆನಂದಬಾಷ್ಪ=ಸಂತೋಷದ ಕಣ್ಣೀರು

ಆಭರಣ = ಒಡವೆ

ಆರಕ್ಷಕ = ಪೋಲೀಸು

ಆಸ್ಥಾನ = ರಾಜಸಭೆ, ದರ್ಬಾರು

## ಇ

ಇಂಗಿತ=ಆಶಯ, ಮನಸ್ಸಿನ ಭಾವ

ಇತಿಹಾಸ=ಚರಿತ್ರೆ

ಇಚ್ಛೆ=ಅಪೇಕ್ಷೆ, ಬಯಕೆ

ಇನಿಯ=ನಲ್ಲ, ಪ್ರಿಯ, ಪತಿ

ಇಳೆ=ಭೂಮಿ, ನೆಲ

## ಉ

ಉಕ್ಕು=ಹಿಗ್ಗು, ಚಿಮ್ಮು, ಹದಗೊಳಿಸಿದ ಕಬ್ಬಿಣ

ಉಡುಪು=ತೊಡುವ ಬಟ್ಟೆ

ಉತ್ತುಂಗ=ಉನ್ನತ, ಎತ್ತರ

ಉದಾರಿ=ಧಾರಾಳಿ, ಉಪಕಾರಿ

ಉದ್ಗಾರ=ಭಾವಾವೇಶದಿಂದ ಕೂಡಿದ ಮಾತು

ಉನ್ನತ=ಮೇಲ್ಮಟ್ಟದ, ಎತ್ತರವಾದ

ಉಪಾಹಾರ=ತಿಂಡಿ ತಿನಸು, ಉಪ ಆಹಾರ

ಉಭಯ=ಎರಡು

ಉಳಿಸು=ರಕ್ಷಿಸು, ಬದುಕಿಸು

## ಋ

ಋಣ=ಸಾಲ, ಹಂಗು

## ಎ

ಎದೆಗುಂದದೆ=ಧೈರ್ಯಗೆಡದೆ

ಎದೆಗವಚಿ=ಅಪ್ಪಿಕೊಂಡು

ಎಳೆ= ದಾರ, ಚಿಕ್ಕ. ತನ್ನ ಕಡೆಗೆ ಸೆಳೆಯು

## ಒ

ಒಡಕು=ಮನಸ್ತಾಪ, ಬಿರುಕು

ಒಡಂಬಡು=ಒಪ್ಪು, ಸಮ್ಮತಿಸು

ಒಡನೆ=ಕೂಡಲೆ, ತಕ್ಷಣ, ಸಂಗಡ

ಒಡಲು=ಹೊಟ್ಟೆ, ಶರೀರ

ಒಡ್ಡೋಲಗ=ದೊಡ್ಡದಾದ ದರ್ಬಾರು, ಸಭೆ

ಒಪ್ಪಂದ=ಒಪ್ಪಿಗೆ, ಕರಾರು, ಸಮ್ಮತಿ

ಒಪ್ಪತ್ತು=ಒಂದು ಹೊತ್ತು

ಒಲವು=ಆಸಕ್ತಿ, ಆದರ

## ಓ

ಓಲೆ= ಒಡವೆ, ಪತ್ರ

## ಕ

ಕಂಗಾಲಾಗು=ಏನೂ ತೋಚದಾಗು, ದಯನೀಯ ಸ್ಥಿತಿ ತಲುಪು

ಕುಂಠಿತ=ಪೂರ್ಣಗೊಳ್ಳದೆ, ನಿಂತುಹೋದ

ಕಡತ=ಕಾಗದ ಪತ್ರಗಳ ಕಟ್ಟು, ಫೈಲು

ಕರ್ತವ್ಯ=ಮಾಡಬೇಕಾದುದು, ಜವಾಬ್ದಾರಿ

ಕರುಣೆ=ದಯೆ, ಕನಿಕರ

ಕಲಾರಸಿಕ=ಕಲೆಯನ್ನು ಮೆಚ್ಚುವವರು

ಕಸಿದುಕೊಳ್ಳು=ಕಿತ್ತುಕೊಳ್ಳು, ವಶಪಡಿಸಿಕೊಳ್ಳು

ಕಾದಲ=ಪ್ರಿಯ, ಇನಿಯ, ನಲ್ಲ

ಕಾರ್ಮೋಡ=ದಟ್ಟವಾದ ಮೋಡ, ಕಪ್ಪುಮೋಡ

ಕಾಯು=ರಕ್ಷಿಸು, ಪೊರೆ

ಕಾವಲು=ಕಾಯುವುದು, ಪಹರೆ ಮಾಡುವುದು

ಕಾಸು=ನಾಣ್ಯ, ಕಾಯಿಸು

ಕೃಪೆ=ದಯೆ, ಅನುಗ್ರಹ

## ಖ

ಖಳ=ನೀಚ, ದುಷ್ಟ

## ಗ

ಗೊಂದಲ=ಗದ್ದಲ, ತಳಮಳ, ಸಮಸ್ಯೆ

ಗಾಢ=ದಟ್ಟ, ಅಧಿಕ

ಗದ್ಗದಕಂಠ=ಬಿಗಿದ ಕೊರಳು, ಉಮ್ಮಳಿಸು

ಗಮನ=ಲಕ್ಷ್ಯ

ಗೀಳು=ಚಟ, ಹವ್ಯಾಸ

ಗುಟ್ಟು=ರಹಸ್ಯ, ಗೌಪ್ಯ

ಗುಬ್ಬಚ್ಚಿ=ಒಂದು ಜಾತಿಯ ಪುಟ್ಟ ಹಕ್ಕಿ

ಗುರುಕುಲ=ಕಲಿಸುವ ಮನೆ, ವಿದ್ಯಾಭ್ಯಾಸ ನೀಡುತ್ತಿದ್ದ ಗುರುಗಳ ಆಶ್ರಮ

ಗೋಳಿಡು=ಸಂಕಟಪಡು, ದುಃಖಪಡು

ಗ್ರಹ=ಆಕಾಶಕಾಯ, ಆಕಾಶಚರ

ಗ್ರಾಹಕ=ಗಿರಾಕಿ,ಕೊಳ್ಳುವವನು

## ಘ

ಘೋರ=ಭಯಂಕರ, ಉಗ್ರವಾದ

ಘೋಷಣೆ=ಘೋಷ, ಪ್ರಸಾರ ಮಾಡುವಿಕೆ

## ಚ

ಚಾವಡಿ=ಮಂಟಪ, ಪಡಸಾಲೆ

ಚಿಂತಾಕ್ರಾಂತ=ಚಿಂತೆಯಿಂದ ಕೂಡಿದ, ಕದಡಿದ ಮನಸ್ಸಿನ

ಚಿರಸ್ಥಾಯಿ=ಶಾಶ್ವತ, ಗಟ್ಟಿಯಾಗಿ

ಚುರುಕು=ಚಟುವಟಿಕೆಯಿಂದ ಕೂಡಿದ

ಚೆಲ್ಲಾಪಿಲ್ಲಿ=ಅಸ್ತವ್ಯಸ್ತವಾಗಿರುವ, ಹರಡಿರುವ

## ಜ

ಜನನಿ=ತಾಯಿ, ಅಮ್ಮ, ಅವ್ವ

ಜಲ=ನೀರು, ಉದಕ

ಜಲುಮ=ಜನುಮ, ಜನ್ಮ

ಜಾಗೃತ=ಎಚ್ಚರಿಕೆ ಸ್ಥಿತಿ, ಹುಷಾರಾಗಿರುವ

ಜಿಪುಣ=ಜುಗ್ಗ, ಆಸೆಬುರುಕ

ಜೀವಾಳ=ಸತ್ವ, ಸಾರ

ಜ್ಯೇಷ್ಠಪುತ್ರ= ಹಿರಿಯಮಗ, ದೊಡ್ಡಮಗ

ಜೋಡಿ=ಜೊತೆ, ಎರಡು

ಜೋಪಾನ=ಜತನ, ಪಾಲನೆ, ರಕ್ಷಣೆ

ಜೋಳಿಗೆ=ಭಿಕ್ಷೆಯ ಚೀಲ, ಬಟ್ಟೆಯಿಂದ ಮಾಡಿದ ತೊಟ್ಟಿಲು

## ಠ

ಠಣ್ಣನೆ=ಒಂದೇ ಸಲ, ತತ್‌ಕ್ಷಣ

## ತ

ತದೇಕಚಿತ್ತ=ತತ್ಪರತೆ, ಏಕಾಗ್ರತೆ

ತವಕ= ಅವಸರ, ಕಾತರ, ಆತುರ

ತಾಪ=ಬಿಸಿ, ಶಾಖ,

ತಿಲಕ=ಹಣೆಯ ಮೇಲಿನ ಬೊಟ್ಟು, ಸಿಂದೂರ

ತೀರ=ದಡ, ದಂಡೆ, ತಟ

ತುರ್ತು=ಕೂಡಲೆ, ತಕ್ಷಣ, ಒಡನೆ

ತೆಗಳು=ನಿಂದಿಸು, ಅವಹೇಳನಮಾಡು

ತೆತ್ತು=ಕೊಟ್ಟು, ನೀಡಿ

ತೊಂದರೆ=ಅಡ್ಡಿ, ಕಷ್ಟ

ತೊಟ್ಟು=ಧರಿಸಿಕೊಂಡು, ಬಿಂದು

ತೋಡಿಕೊಳ್ಳು=ಹೇಳಿಕೊಳ್ಳು, ನಿವೇದಿಸಿಕೊಳ್ಳು

## ದ

ದಾರಿಹೋಕ=ಪ್ರಯಾಣಿಕ, ಪಥಿಕ

ದಿವ್ಯ=ಮನೋಹರವಾದ, ಆಕರ್ಷಕವಾದ

ದುಡಿಮೆ=ಕೆಲಸ, ಸಂಪಾದನೆ

ದುರಂತ=ದುಃಖಾಂತ, ಅಪಘಾತ

ದುರಾಸೆ=ಕೆಟ್ಟ ಆಸೆ, ಬಲು ಆಸೆ

ದೌರ್ಬಲ್ಯ=ಬಲಹೀನತೆ, ಶಕ್ತಿಹೀನತೆ

## ಧ

ಧರೆ=ಭೂಮಿ, ಧರಣಿ

## ನ

ನಂದಿಹೋಗು=ಆರಿಹೋಗು, ಇಲ್ಲವಾಗು

ನಮೂದಿಸು=ದಾಖಲೆ ಮಾಡು, ಬರೆ, ನೋಂದಾಯಿಸು

ನವಿರಾದ=ಮೃದುವಾದ, ಸೂಕ್ಷ್ಮವಾದ, ನುಣುಪಾದ

ನವೀಕರಣ=ಹೊಸತುಮಾಡುವುದು, ಜೀರ್ಣೋದ್ಧಾರ

ನಾಚು=ಲಜ್ಜೆಪಡು, ನಾಚಿಕೆಪಡು, ನೃತ್ಯ

ನಿರಂತರ=ಯಾವಾಗಲೂ, ಸದಾ

ನಿಟ್ಟುಸಿರು=ದೀರ್ಘವಾಗಿ ಬಿಡುವ ಉಸಿರು

ನಿರ್ಮಾಣ=ರಚನೆ, ಕಟ್ಟುವಿಕೆ

ನಿರಾಸೆ=ಆಸೆಯನ್ನು ಕಳೆದುಕೊಳ್ಳುವಿಕೆ

ನಿರ್ವಾಹಕ= ನಡೆಸುವವನು, ನಿರ್ವಹಿಸುವವನು

ನೀಟು=ಸೊಗಸು, ಚೆಂದ, ನೇರ

ನೆರವಾಗು=ಸಹಾಯವಾಗು, ಸಹಕರಿಸು

ನೋವು=ವೇದನೆ, ದುಃಖ, ಯಾತನೆ

## ಪ

ಪಟ್ಟ= ಅಧಿಕಾರ, ಪದವಿ

ಪಟ್ಟಣ= ನಗರ, ಪುರ, ಶಹರ

ಪರವಶ=ಮೈಮರೆತ, ಸ್ವಾತಂತ್ರ್ಯವಿಲ್ಲದಿರುವದು

ಪರಿತಪಿಸು=ಬಹಳ ದುಃಖಿಸು, ಚಿಂತೆಪಡು

ಪರಿಮಳ=ಕಂಪು, ಸುವಾಸನೆ

ಪರಿಸಮಾಪ್ತಿ=ಮುಕ್ತಾಯ, ಕೊನೆ

ಪಾಂಡಿತ್ಯ=ವಿದ್ವತ್ತು

ಪಾದರಸ=ಒಂದು ಬಗೆಯ ದ್ರವರೂಪದ ಲೋಹ

ಪಾರಾಗು= ಬಿಡುಗಡೆಹೊಂದು, ಬಚಾವಾಗು

ಪಾಲಿಸು= ಅನುಸರಿಸು, ರಕ್ಷಿಸು

ಪೀಡಿಸು=ಕಾಡು, ಕಿರುಕುಳಕೊಡು

ಪುಟಾಣಿ=ಚಿಕ್ಕದಾದ, ಸಣ್ಣ

ಪ್ರಖರ=ಬಹು ತೀಕ್ಷ್ಣವಾದ

ಪ್ರಗತಿ= ಅಭಿವೃದ್ಧಿ, ಮುನ್ನಡೆ

ಪ್ರಜೆ=ಜನಾಂಗ, ನಾಗರಿಕ

ಪ್ರತಿಭಟನೆ=ವಿರೋಧ, ಪ್ರತಿರೋಧ

ಪ್ರತಿಜ್ಞೆ=ಶಪಥ, ವಾಗ್ದಾನ

ಪ್ರತಿಭೆ=ಕಾಂತಿ, ಜ್ಞಾನ

ಪ್ರಥಮ=ಮೊದಲನೆಯ, ಪ್ರಮುಖ

ಪ್ರಮಾಣ=ಪ್ರತಿಜ್ಞೆ, ಸಾಕ್ಷಿ, ಅಳತೆ

ಪ್ರಯಾಣಿಕ=ದಾರಿಹೋಕ, ಪಯಣಿಗ

ಪ್ರವೇಶದ್ವಾರ=ಒಳಹೋಗುವ ದಾರಿ

ಪ್ರಸಂಗ=ಸಂದರ್ಭ, ಘಟನೆ

ಪ್ರೇರೇಪಿಸು=ಉತ್ತೇಜಿಸು

ಪೋಷಕ=ಪಾಲಕ, ಪಾಲನೆ ಮಾಡುವವನು

ಪೋಷಣೆ=ರಕ್ಷಣೆ, ಪಾಲನೆ

## ಬ

ಬಡಾಯಿ=ಕೊಚ್ಚಿಕೊಳ್ಳು, ಜಂಭದ ಮಾತು

ಬದ್ಧ=ನಿಯಮಕ್ಕೆ ಒಳಗಾದ, ನೀತಿಗೆ ಅಂಟಿಕೊಂಡ

ಬಯಲು=ಅಂಗಳ, ಮೈದಾನ, ಶೂನ್ಯ

ಬರ=ಕ್ಷಾಮ, ದುರ್ಭಿಕ್ಷೆ

ಬಳಿಗೆ=ಹತ್ತಿರಕ್ಕೆ, ಸನಿಹಕ್ಕೆ

ಬೀದಿ=ಮಾರ್ಗ, ಹಾದಿ

ಬೆರಗು=ಅಚ್ಚರಿ, ಆಶ್ಚರ್ಯ

ಬೆಸ್ತ=ಮೀನುಗಾರ, ಮೊಗವೀರ

ಬೊಗಸೆ=ತೆರೆದ ಅಂಗೈ

ಬೊಬ್ಬಿಡು=ಕೂಗಾಡು, ಗಟ್ಟಿಯಾಗಿ ಅರಚು

## ಭ

ಭಂಗ=ಸೋಲು, ವೈಫಲ್ಯ, ಮುರಿಯು

ಭಂಡಾರ=ಬೊಕ್ಕಸ, ಖಜಾನೆ

ಭರವಸೆ=ನಂಬಿಕೆ, ವಿಶ್ವಾಸ

ಭಾರಿ=ದೊಡ್ಡ, ಮಹತ್ವದ

ಭಾವಿಸು=ಕಲ್ಪಿಸಿಕೊಳ್ಳು, ಊಹಿಸಿಕೊಳ್ಳು

ಭೀಷಣ=ಭೀಕರ, ಭಯಂಕರ

ಭೇದ=ಮುರಿಯುವುದು, ತಾರತಮ್ಯ

ಭ್ರಷ್ಟಾಚಾರ=ಲಂಚಗುಳಿತನ, ದಾರಿತಪ್ಪುವುದು

## ಮ

ಮಂಡಿಸು=ಮುಂದಿಡು, ವಿಷಯ ಪ್ರಸ್ತಾವಿಸು

ಮಡಗು=ಇಡು, ಇರಿಸು

ಮಡಿಲು=ಆಶ್ರಯ, ಉಡಿ

ಮಮಕಾರ=ವ್ಯಾಮೋಹ, ಪ್ರೀತಿ.

ಮನಸೋಲು=ವಶವಾಗು, ಆಕರ್ಷಣೆಗೆ ಒಳಪಡು

ಮನುಕುಲ=ಮಾನವ ವಂಶ

ಮನೋಭಾವ=ಮನಸ್ಸಿನ ಭಾವನೆ, ಮನೋರಥ

ಮಹತ್ವ=ಹಿರಿಮೆ, ಘನತೆ

ಮಹರ್ಷಿ=ಶ್ರೇಷ್ಠ ತಪಸ್ವಿ

ಮಹಿಮೆ=ಹಿರಿಮೆ, ದೊಡ್ಡತನ

ಮಾರ್ಪಡಿಸು=ಬದಲಾವಣೆ ಮಾಡು

ಮಾನವೀಯತೆ=ಮನುಷ್ಯತ್ವ, ಮನುಷ್ಯ ಧರ್ಮ

ಮಾನಸ= ಮನಸ್ಸು, ಮನಸ್ಸಿಗೆ ಸಂಬಂಧಿಸಿದ, ಒಂದು ಸರೋವರ

ಮಾರ್ನುಡಿ= ಪ್ರತಿಮಾತು, ಎದುರುಮಾತು

ಮಾಯವಾಗು=ಮರೆಯಾಗು, ಕಾಣದಾಗು

ಮಿಗಿಲು=ಹೆಚ್ಚು, ಬಹಳ

ಮಿಡಿ=ಹೀಚು, ತುಡಿಯು

ಮುಂಚೆ=ಮೊದಲು, ಪೂರ್ವ

ಮುಖ್ಯಸ್ಥ=ಪ್ರಮುಖ ವ್ಯಕ್ತಿ, ಯಜಮಾನ

ಮುಡಿಪು=ಮೀಸಲು, ಪ್ರತ್ಯೇಕವಾಗಿರಿಸುವುದು

ಮುತ್ತು=ನವರತ್ನಗಳಲ್ಲಿ ಒಂದುವಿಧ, ಆವರಿಸು, ಮುದ್ದಿಸು

ಮೂರ್ಛೆ=ಎಚ್ಚರತಪ್ಪು, ಮೈಮರೆಯು

ಮೂಲ=ಆದಿ, ಆಕರ, ಅಸಲು

ಮೇಧಾವಿ=ಪ್ರತಿಭಾವಂತ, ಬುದ್ಧಿವಂತ

ಮೇಟಿ=ಪ್ರವಾಸಿ ಮಂದಿರದ ಮುಖ್ಯಸೇವಕ.

ಮೇರು= ಶ್ರೇಷ್ಠ, ಎತ್ತರ, ಒಂದು ಪರ್ವತ

## ಯ

ಯಥಾಪ್ರಕಾರ=ಎಂದಿನಂತೆ, ಯಾವಾಗಿನ ಹಾಗೆ

ಯಶ=ಯಶಸ್ಸು, ಕೀರ್ತಿ, ಪ್ರಸಿದ್ಧಿ

## ರ

ರಮಿಸು=ಸಮಾಧಾನಪಡಿಸು, ಸಂತೋಷಗೊಳಿಸು

ರವಿ=ಸೂರ್ಯ, ಭಾಸ್ಕರ, ಆದಿತ್ಯ

ರೆಕ್ಕೆ=ಗರಿ, ಪುಕ್ಕ

ರೊಕ್ಕ=ಹಣ, ಕಾಸು, ದುಡ್ಡು

ರೋಚಕ=ರುಚಿಯಾದ, ಕುತೂಹಲಕಾರಿಯಾದ

ರೋದನ=ಅಳುವಿಕೆ, ಪ್ರಲಾಪ

## ಲ

ಲೀಲಾಜಾಲ=ಬಹುಸುಲಭ, ನಿರಾಯಾಸ

## ವ

ವಂದನೆ=ನಮಸ್ಕಾರ, ಕೃತಜ್ಞತೆ

ವಟಗುಟ್ಟು=ಗೊಣಗು, ಕಿರಿಕಿರಿಮಾಡು

ವರ್ತನೆ=ನಡತೆ, ಸ್ವಭಾವ

ವನಸ್ಪತಿ=ಸಸ್ಯಗಳಿಂದ ತೆಗೆದ ಎಣ್ಣೆ, ಸಸ್ಯಜಾತಿ

ವಿಜೃಂಭಣೆ=ಸಂಭ್ರಮದ ಪ್ರದರ್ಶನ

ವಿಧೇಯತೆ=ವಿನಯದ ನಡತೆ

ವಿರಹ=ವಿಯೋಗ, ಅಗಲಿಕೆ

ವಿರಾಜಮಾನ=ಸಂಭ್ರಮಪೂರ್ವಕ ಆಸೀನನಾಗು

ವಿವೇಕ=ಬುದ್ಧಿ, ಜ್ಞಾನ

ವೇದನೆ=ನೋವು, ಯಾತನೆ

ವೇಷ=ಉಡುಪು, ಅಲಂಕಾರ

ವೈಖರಿ=ವಿಶಿಷ್ಟ ರೀತಿ, ಶೈಲಿ

ವೃತ್ತಿ=ಕಸುಬು, ಉದ್ಯೋಗ

ವ್ಯವಹಾರ=ದಿನನಿತ್ಯದ ಕೆಲಸ

## ಶ

ಶತಪದಿಸು=ಅತ್ತಿತ್ತ ತಿರುಗಾಡು

ಶಪಥ=ಪ್ರತಿಜ್ಞೆ, ಪ್ರಮಾಣ

ಶೋಭೆ=ಪ್ರಕಾಶ, ಬೆಳಕು

ಶೋಷಣೆ=ಸ್ವಾರ್ಥಕ್ಕಾಗಿ ಬಳಸುವಿಕೆ, ತುಳಿಯುವಿಕೆ

ಶ್ರದ್ಧೆ=ನಿಷ್ಠೆ, ದೃಢವಾದ ಆಸಕ್ತಿ

## ಸ

ಸಂಕೋಚ=ಕುಗ್ಗು, ಮುದುಡು

ಸಂಗ್ರಹಿಸು=ಒಟ್ಟುಗೂಡಿಸು, ರಾಶಿಮಾಡು

ಸಂಭ್ರಮ=ಉತ್ಸಾಹ, ಹುರುಪು

ಸಂಪಾದನೆ=ಗಳಿಕೆ, ಲಾಭ

ಸಂಯಮ=ತಾಳ್ಮೆ, ಸಹನೆ

ಸಂಶಯ=ಸಂದೇಹ, ಅನುಮಾನ

ಸತ್ಕಾರ=ಉಪಚಾರ, ಗೌರವ

ಸದ್ಗುಣ=ಒಳ್ಳೆಯ ಗುಣ, ಸದಾಚಾರ

ಸನ್ನಿವೇಶ=ಸಂದರ್ಭ, ಘಟನೆ

ಸಮ್ಮುಖ=ಎದುರು, ಮುಂಭಾಗ

ಸಲ್ಲಾಪ=ಸವಿನುಡಿ, ಹಿತಕರಮಾತು

ಸಲೀಸು=ಸರಳ, ಸರಾಗ

ಸವಿನುಡಿ=ಮಧುರಮಾತು, ಹಿತವಚನ

ಸಾಕ್ಷಾತ್=ಪ್ರತ್ಯಕ್ಷ, ಕಣ್ಣೆದುರು ಕಾಣಿಸುವ

ಸಾರು=ಡಂಗುರಹೊಡೆ, ಪ್ರಚಾರಮಾಡು

ಸಾಹುಕಾರ=ಶ್ರೀಮಂತ, ಯಜಮಾನ

ಸಾಷ್ಟಾಂಗ=ಎಂಟು ಅಂಗಗಳನ್ನು ನೆಲಕ್ಕೆ ತಾಗಿಸಿ ಮಾಡುವ ನಮಸ್ಕಾರ

ಸಿಂಹಾಸನ=ಅರಸನ ಪೀಠ, ರಾಜನ ಗದ್ದಿಗೆ

ಸಿದ್ಧಿ=ಸಾಧನೆ ಮಾಡು

ಸೀಮಿತ=ಮಿತಿಗೆ ಒಳಪಟ್ಟ

ಸುಧಾರಣೆ=ಸರಿಪಡಿಸುವಿಕೆ, ಉತ್ತಮಗೊಳಿಸುವಿಕೆ

ಸೂಕ್ಷ್ಮ=ಅತಿಚಿಕ್ಕದಾದ, ಸಣ್ಣದಾದ

ಸೃಜನಶೀಲ=ಸೃಷ್ಟಿಸುವ ಗುಣವುಳ್ಳದ್ದು, ವೈಶಿಷ್ಟ್ಯವುಳ್ಳದ್ದು

ಸೆಡವು=ಸಿಡಿಮಿಡಿಗೊಳ್ಳು, ಕೋಪ

ಸೆಳಕು=ಸೆಳೆತ, ಆಕರ್ಷಣೆ

ಸೇವಕ=ಆಳು, ಸೇವೆ ಮಾಡುವವನು

ಸೋಕು=ತಗಲು, ತಾಗು, ಸ್ಪರ್ಶಿಸು

ಸೌಂದರ್ಯ=ಚೆಲುವು, ಲಾವಣ್ಯ, ಸೊಬಗು

ಸ್ತ್ರೀ=ಮಾನಿನಿ, ನಾರಿ, ಹೆಂಗಸು

ಸ್ವಗತ=ತನಗೆ ತಾನೇ ಹೇಳಿಕೊಳ್ಳುವುದು

ಸ್ವಪ್ನ=ಕನಸು

ಸ್ವಾಭಿಮಾನ=ಆತ್ಮಗೌರವ

ಸ್ಥಿತಿ=ಅವಸ್ಥೆ, ಪಾಡು

## ಹ

ಹತ್ತಿಕ್ಕು=ಅಡಗಿಸು, ತುಳಿ, ದಮನಮಾಡು

ಹರಕೆ=ಹಾರೈಕೆ, ಆಶೀರ್ವಾದ, ತಪ್ಪುಕಾಣಿಕೆ

ಹರುಷ=ಸಂತೋಷ, ನಲಿವು

ಹರಿಕಥೆ=ಹರಿಯ ಕುರಿತ ಕಥಾಪ್ರಸಂಗಗಳು

ಹರಿದಾಸ=ವಿಷ್ಣುಭಕ್ತ, ಕೀರ್ತನಕಾರ

ಹಳಿ=ನಿಂದಿಸು, ರೈಲುಕಂಬಿ

ಹಾರು=ಜಿಗಿ, ನೆಗೆ

ಹುಗಿದಿಡು=ನೆಲದಲ್ಲಿ ಮುಚ್ಚಿಡು

ಹುಲು=ಹುಲ್ಲು, ಅಲ್ಪ, ಕಿರುಕಡ್ಡಿ

ಹೂಡು=ಪ್ರಾರಂಭಿಸು, ಅಣಿಗೊಳಿಸು

ಹೆಬ್ಬಂಡೆ=ದೊಡ್ಡಬಂಡೆ, ಹಿರಿದಾದ ಬಂಡೆ

ಹೊಂಚು=ಸಮಯ ಸಾಧಿಸು

ಹೊತ್ತಿನಯ್ಯ=ಸೂರ್ಯ

ಹೊತ್ತುಮಾಡು=ತಡಮಾಡು, ಸಮಯ ಮೀರು

ಹೊನ್ನು=ಬಂಗಾರ, ಚಿನ್ನ, ಕನಕ

ಹೊಣೆ=ಜವಾಬ್ದಾರಿ, ಭಾರ

ಹೊಳೆ=ನದಿ, ಪ್ರಕಾಶಿಸು

# ಎರಡನೆಯ ಸೆಮಿಸ್ಟರ್

## ಪದ್ಯ ಪಾಠ-೧

## ಗಂಗವ್ವ ತಾಯಿ





ಬಾ ತಾಯಿ ಬಾ ತಾಯಿ
ಬಾರವ್ವ ತಾಯಿ
ಗಂಗವ್ವ ತಾಯಿ

ನೀರವ್ವ ತಾಯಿ
ನೆಲದ ಕಣ ಕಣದಾಗ
ಮನದ ಪದ ಪದರಾಗ
ತುಂಬವ್ವ ತಾಯಿ
ಜೀವನಾ ನೀನೆಮಗೆ
ನೀಡವ್ವ ತಾಯಿ

ನೀನೊಬ್ಬಳಿದ್ದರೆ
ಜಗದಾಗ ನಭದಾಗ
ಜಳ ಜಳ ಜಳ ಜಳ
ಜಲ ಜಲ ತಾಯಿ
ಹೊಳೆಯವ್ವ ತಾಯಿ
ನೀರವ್ವ ತಾಯಿ

ನೆಲದ ಒಳಹೊರಗೆಲ್ಲ
ಪ್ರಾಣದಾ ತುಂಬೆಲ್ಲ
ನಗುನಗುತ ನಲಿಯುತ್ತ
ಪುಟಿಯುತ್ತ ಕುಣಿಯುತ್ತ
ಚಿಮ್ಮುತ್ತ ಜಿಗಿಯುತ್ತ
ಹರಿಯುತ್ತ ಸುರಿಯುತ್ತ
ಧೋ ಧೋ ಬಾರವ್ವ
ನೀರವ್ವ ಬಾರವ್ವ

ಒಣಗೀದ ನೆಲದಾಗ
ಹಸಿ ಹಸಿರು ನೆಡಲಾಕ
ಉಸಿರುಸಿರು ಉಳಿಸಾಕ
ಕೊಳೆಯೆಲ್ಲ ತೊಳಿಯಾಕ



ಭರಭರ ಥರಥರ
ಜೀವದಾ ತುಣುಕಾಗಿ
ಮೈ ಮನಸ ಹೊಲಸೆಲ್ಲ
ತೊಳಿಯವ್ವ ತಾಯಿ
ನೀರವ್ವ ತಾಯಿ
ಗಂಗವ್ವ ತಾಯಿ



ಬಾರವ್ವ ತಾಯಿ
ಗಂಗವ್ವ ಮಾಯಿ
ಬಾ ತಾಯಿ ಬಾ ತಾಯಿ
ನೀರವ್ವ ತಾಯಿ
ನೀರವ್ವ ಗಂಗವ್ವ
ಮಳಿಯಾಗಿ ಬಾರವ್ವ
ಹೊಳಿಯಾಗಿ ಹರಿಯವ್ವ
ಒಣಗೀದ ನೆಲದಾಗ
ಹಸುರಾಗಿ ಹೊಳಿಯವ್ವ
ಕಲಕಲ ನದಿಯಾಗಿ
ಹನಿ ಹನಿ ಕಣ ಕಣ

ಬಾ ತಾಯಿ ಬಾ ತಾಯಿ
ಬಾರವ್ವ ತಾಯಿ
ಗಂಗವ್ವ ತಾಯಿ

–ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ

ಕ್ಷೇತ್ರ : ಮಾತನಾಡುವುದು

ಸಾಮರ್ಥ್ಯ : ಹೊಸ ವಿಷಯಗಳನ್ನು ಗಮನವಿಟ್ಟು ಆಲಿಸಿ ಮಾತಿನಲ್ಲಿ ಸ್ಪಷ್ಟವಾಗಿ ಪ್ರಕಟಿಸುವುದು.

**ಆಶಯ :**

ಪಂಚಭೂತಗಳಲ್ಲಿ ಜಲವು ಒಂದು. ಜಲದ ಇನ್ನೊಂದು ಹೆಸರು ಗಂಗೆ. ಇಳಿದು ಬಾ ತಾಯಿ ಇಳಿದು ಬಾ ಎಂಬುದಾಗಿ ದ.ರಾ.ಬೇಂದ್ರೆಯವರು ಗಂಗೆಯನ್ನು ಭೂಮಿಗೆ ಆಹ್ವಾನಿಸಿದ್ದರು. ನೀರಿಲ್ಲದೆ ಬರ ಬಂದಾಗಲೆಲ್ಲ ಮತ್ತೆ ಮತ್ತೆ ಕವಿಗಳು ಗಂಗೆಯನ್ನು ಭೂಮಿಗೆ ಬರುವಂತೆ ಆಹ್ವಾನಿಸುತ್ತಾರೆ. ನೀರಿಲ್ಲದಿದ್ದರೆ ಬದುಕೇ ದುಸ್ತರ. ನೀರು ಭೂಮಿಗಿಳಿದು ಬಂದು ನೆಲದಲ್ಲಿ ಹರಿಯುವ ಕ್ರಮವೇ ಒಂದು ಅದ್ಭುತ ಕಾವ್ಯ. ಮನುಷ್ಯ ಹಾಗೂ ನೀರಿನ ಪರಸ್ಪರ ಸಂಬಂಧವನ್ನು ಮೆಲುಕು ಹಾಕುವ ಕವನವಿದು.

**ಕವಿ ಕೃತಿ ಪರಿಚಯ :**



ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಕನ್ನಡದ ಪ್ರಮುಖ ಕವಿ, ವಿಮರ್ಶಕ, ಅಂಕಣಕಾರ, ಹಾಗೂ ಅನುವಾದಕರು. ಧಾರವಾಡ ಸನಿಹದ ಯಾದವಾಡದಲ್ಲಿ ೩-೧೧-೧೯೩೯ ಬಸೆಟ್ಟೆಪ್ಪ ಹಾಗೂ ಗಿರಿಜಾದೇವಿಯವರ ಮಗನಾಗಿ ಜನಿಸಿದರು. ಧಾರವಾಡದ ವಿದ್ಯಾಗಿರಿಯ 'ಹೂವುನ'ಯಲ್ಲಿ ನೆಲೆಗೊಂಡಿರುವ ಡಾ. ಪಟ್ಟಣಶೆಟ್ಟಿಯವರು ೬೦ಕ್ಕಿಂತ ಹೆಚ್ಚು ಕನ್ನಡ ಮತ್ತು ೧೦ರಷ್ಟು ಹಿಂದೀ ಪುಸ್ತಕಗಳನ್ನು ರಚಿಸಿದ್ದಾರೆ. 'ನೀನಾ', 'ಔರಂಗಜೇಬ', 'ಪರದೇಸಿ ಹಾಡುಗಳು', 'ಅಯಸ್ಕಾಂತ', 'ಇಷ್ಟು ಹೇಳಿದ ಮೇಲೆ', 'ಅಪರಂಪಾರ' ಮುಂತಾದ ಕವನ ಸಂಗ್ರಹಗಳು, 'ಮಾವ', 'ಹಕ್ಕಿಗಳು' ಮುಂತಾದ ಕಥಾಸಂಗ್ರಹಗಳು, 'ಅನುಶೀಲನ', 'ರಂಗಾಯಣ', 'ಪರಿಭಾವನ', 'ವಿವೇಚನ' ಮುಂತಾದ ವಿಮರ್ಶಾಕೃತಿಗಳು, 'ಆಷಾಢದ ಒಂದು ದಿನ', 'ಆಧೇಅಧೂರೇ', 'ಅಂಧಯುಗ', 'ಮುದ್ರಾರಾಕ್ಷಸ', 'ಶಸ್ತ್ರಸಂತಾನ', 'ಕೋರ್ಟ್ ಮಾರ್ಷಲ್', 'ಚೋರ ಚರಣದಾಸ', 'ಆಕಾಶಭೇರಿ', 'ಕಾಲ ಕೆಳಗಿನ ನೆಲ' ಮುಂತಾದ ಅನುವಾದ ನಾಟಕಗಳು ಮುಖ್ಯವಾದವುಗಳು.

೧೯೯೭ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ 'ಗೌರವ ಫೆಲೊಶಿಪ್', ೧೯೯೮ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಇತ್ಯಾದಿ ಅನೇಕ ಪ್ರಶಸ್ತಿಗಳು ಇವರಿಗೆ ಸಂದಿವೆ. ಕೇಂದ್ರ ಸಾಹಿತ್ಯ ಅಕಾದೆಮಿಯ ಕಾರ್ಯಕಾರಿ ಸಮಿತಿ ಸದಸ್ಯ ಮತ್ತು ಕನ್ನಡ ಸಲಹಾ ಮಂಡಳಿಯ ಸಂಚಾಲಕರಾಗಿದ್ದರು.

ಪ್ರಸ್ತುತ 'ಗಂಗವ್ವ ತಾಯಿ' ಕವನವನ್ನು ಇವರ 'ನಿನ್ನ ಮರೆಯೂ ಮಾತು' ಎಂಬ ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

## ಅರ್ಥ ತಿಳಿಯಿರಿ :

ದುಸ್ತರ– ಕಠಿಣ, ಕಷ್ಟಸಾಧ್ಯ. ಕಣ– ಅತ್ಯಂತ ಸೂಕ್ಷ್ಮವಾದ ಅಂಶ. ಪ್ರಾಣ– ಜೀವ, ಜೀವ ಉಳಿಯಲು ಕಾರಣವಾದ ಒಂದು ವಾಯು. ನಭ–ಆಕಾಶ, ಗಗನ, ಅಂಬರ. ಹೊಳೆ– ನದಿ, ಮಿನುಗು. ಕುಣಿ–ಕುಳಿ, ಹೊಂಡ, ನರ್ತಿಸು. ಕೊಳೆ–ಕಲ್ಮಷ, ಹೊಲಸು. ಚಿಮ್ಮು–ಹಾರು, ಜಿಗಿ, ನೆಗೆ. ತೊಳೆ–ನೀರಿನಿಂದ ಸ್ವಚ್ಛಗೊಳಿಸು. ಮಾಯ–ಇದ್ದಕ್ಕಿದ್ದಂತೆ ಕಾಣೆಯಾಗುವುದು, ಮರೆಯಾಗಿರುವುದು. ಹರಿ–ಓಡು, ಪ್ರವಹಿಸು, ಹೋಗು. ತುಣುಕು– ಚೂರು, ತುಂಡು.

## ವಿವರ ತಿಳಿಯಿರಿ:

ಗಂಗವ್ವ– ಭಾರತದ ನೆಲದಲ್ಲಿ ಹರಿಯುವ ನೀರನ್ನು ಗಂಗೆ ಅಥವಾ ಗಂಗವ್ವ ಎಂದು ಕರೆಯುವರು. ಉತ್ತರ ಭಾರತದ ಪ್ರಮುಖ ನದಿಯೊಂದಕ್ಕೆ 'ಗಂಗಾ ನದಿ' ಎಂದು ಹೆಸರಿದೆ.

ಪದಪದರಾಗ– ಪ್ರತಿ ಹಂತ ಹಂತಗಳಲ್ಲಿಯೂ, ಪೊರೆಪೊರೆಗಳಲ್ಲಿಯೂ.

## ವ್ಯಾಕರಣ ಮಾಹಿತಿ

### ಪ್ರಾಸಾಕ್ಷರಗಳು

**ಕೆಳಗಿನ ಪದ್ಯವನ್ನು ಗಮನಿಸಿರಿ.**

ಉತ್ತಮರ ಗೆಳೆತನ ಪುತ್ಥಳಿ ಬಂಗಾರ
ಮತ್ತಹೀನರ ಗೆಳೆತನ । ಮಾಡಿದರ
ಹಿತ್ತಾಳಿಗಿಂತ ಬಲುಹೀನ.

ಇಲ್ಲಿ 'ತ್ತ' ಅಕ್ಷರವು ಪದ್ಯದ ಎಲ್ಲ ಸಾಲುಗಳಲ್ಲಿ ಪುನರಾವರ್ತಿತವಾಗಿ ಬಂದಿದೆ. ಇದು ಪ್ರಾಸಾಕ್ಷರ.

ಪದ್ಯದ ನಿರ್ದಿಷ್ಟ ಸ್ಥಳದಲ್ಲಿ ಬರುವ ಪುನರಾವರ್ತಿತ ಅಕ್ಷರಗಳನ್ನು ಪ್ರಾಸಾಕ್ಷರ ಎನ್ನುವರು.

ಸಾಮಾನ್ಯವಾಗಿ ಪ್ರಾಸಾಕ್ಷರಗಳು ಪದ್ಯದ ಸಾಲುಗಳಲ್ಲಿ ಮೊದಲು ಮತ್ತು ಕೊನೆಯಲ್ಲಿ ಬರುತ್ತವೆ. ಇದಕ್ಕೆ ಅನುಗುಣವಾಗಿ ಪ್ರಾಸಗಳಲ್ಲಿ ಆದಿಪ್ರಾಸ ಹಾಗೂ ಅಂತ್ಯಪ್ರಾಸಗಳಿರುತ್ತವೆ.

ಪದ್ಯದ ಪ್ರತಿಯೊಂದು ಸಾಲಿನ ಎರಡನೆಯ ಅಕ್ಷರವು ಪುನರಾವರ್ತಿತವಾದರೆ ಅದು ಆದಿಪ್ರಾಸ. (ಮೇಲಿನ ಪದ್ಯವನ್ನು ಗಮನಿಸಿರಿ.)

ಕೊನೆಯ ಅಕ್ಷರವು ಪುನರಾವರ್ತಿತವಾದರೆ ಅದು ಅಂತ್ಯಪ್ರಾಸ;

ಒಂದು ಉದಾಹರಣೆಯನ್ನು ನೋಡೋಣ :

ನೀರವ್ವ ಗಂಗವ್ವ
ಮಳಿಯಾಗಿ ಬಾರವ್ವ
ಹೊಳಿಯಾಗಿ ಹರಿಯವ್ವ

ಇಲ್ಲಿ 'ವ್ವ' ಎಂಬ ಅಕ್ಷರವು ಪದ್ಯದ ಪ್ರತಿ ಸಾಲಿನ ಕೊನೆಯಲ್ಲಿ ಪುನರಾವರ್ತಿತವಾಗಿದೆ. ಹೀಗಾಗಿ ಇದು 'ಅಂತ್ಯಪ್ರಾಸ'ವೆನಿಸುವುದು.

## ಅಭ್ಯಾಸಗಳು

### ಅ. ಬಿಟ್ಟಸ್ಥಳವನ್ನು ಕೆಳಗೆ ನೀಡಲಾದ ಸೂಕ್ತ ಪದಗಳಿಂದ ಭರ್ತಿಮಾಡಿರಿ.

೧. ಬಾರವ್ವ ತಾಯಿ ________________ ತಾಯಿ.

೨. ಹೊಳೆಯವ್ವ ತಾಯಿ ____________ ತಾಯಿ.

೩. ಮೈಮನಸ ಹೊಲಸೆಲ್ಲ _____________ ತಾಯಿ.

೪. ನೀರವ್ವ ಗಂಗವ್ವ _____________ ಬಾರವ್ವ.

೫. ಒಣಗೀದ ನೆಲದಾಗ ___________ ಹೊಳೆಯವ್ವ.

(ನೀರವ್ವ, ಹಸುರಾಗಿ, ಗಂಗವ್ವ, ತೊಳೆಯವ್ವ, ಮಳಿಯಾಗಿ, ಸುರಿಯುತ್ತ)

### ಆ. ಸಮಾನಾರ್ಥಕ ಪದಗಳನ್ನು ಬರೆಯಿರಿ.

೧. ನೀರು        ೨. ನಭ        ೩. ಕುಣಿ        ೪. ತಾಯಿ

### ಇ. ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ನೀರು ಎಲ್ಲೆಲ್ಲಿ ತುಂಬಬೇಕು ಎಂದು ಕವಿ ಹೇಳುತ್ತಾರೆ?

೨. ನೀರು ಹೇಗೆಲ್ಲ ಹರಿದು ಬರಬೇಕೆಂದು ಕವಿ ವಿನಂತಿಸಿಕೊಂಡಿದ್ದಾರೆ?

೩. ಒಣಗಿದ ನೆಲದಲ್ಲಿ ನೀರು ಹೇಗೆ ಹೊಳೆಯಬೇಕು ಎಂದು ಕವಿ ಹೇಳುತ್ತಾರೆ?

೪. ಈ ಕವನವನ್ನು ಬರೆದವರು ಯಾರು?

### ಈ. ಕೊಟ್ಟಿರುವ ಮಾತನ್ನು ಯಾರು ಯಾರಿಗೆ ಯಾವಾಗ ಹೇಳಿದರು?

೧. ನೆಲದ ಕಣಕಣದಾಗ ಮನದ ಪದಪದರಾಗ.

೨. ಹರಿಯುತ್ತ ಸುರಿಯುತ್ತ ಧೋಧೋ ಬಾರವ್ವ.

೩. ಒಣಗೀದ ನೆಲದಾಗ ಹಸಿರುಸಿರು ಉಳಿಸಾಕ.

೪. ಜೀವದಾ ತುಣಕಾಗಿ ಮೈಮನಸ ಹೊಲಸೆಲ್ಲ.

### ಉ. ಎರಡು/ಮೂರು ವಾಕ್ಯದಲ್ಲಿ ಉತ್ತರಿಸಿರಿ.

೧. ನೀರು ಎಲ್ಲೆಲ್ಲಿ ತುಂಬಬೇಕೆಂದು ಕವಿ ಬಯಸುತ್ತಾನೆ?

೨. ಗಂಗವ್ವ ಇದ್ದರೆ ಎಲ್ಲೆಲ್ಲಿ, ಏನೇನು ಆಗುವುದೆಂದು ಕವಿ ಹೇಳಿದ್ದಾನೆ?

೩. ನೀರು ಯಾವಯಾವ ಕೆಲಸಕ್ಕೆ ಬೇಕು ಎಂದು ಕವಿ ಹೇಳಿದ್ದಾನೆ?

ಊ. ಕೊಟ್ಟಿರುವ ಪದ್ಯದಲ್ಲಿ ಪ್ರಾಸಪದಗಳನ್ನು ಗುರುತಿಸಿ ಬರೆಯಿರಿ.

ಬೆಳ್ಳಾನ ಎರಡೆತ್ತು ಬೆಳ್ಳಿಯ ಬಾರುಕೋಲು
ಹಳ್ಳಾದ ಮಾಗಿ ಹೊಡೆದಾವು । ಎತ್ತಿನ
ತೆಳ್ಳಾನ ಹೊಟ್ಟೆ ಹಸಿದಾವು.

ಋ. ಪ್ರಾಸಪದವನ್ನು ಹೊಂದಿದ ಒಂದು ಪದ್ಯವನ್ನು ಸಂಗ್ರಹಿಸಿರಿ. ಅದು ಯಾವ ಪ್ರಾಸದಲ್ಲಿದೆ ಎಂಬುದನ್ನು ಗುರುತಿಸಿರಿ.

ಎ. ನೀರಿನ ಉಪಯೋಗವನ್ನು ಸಂಗ್ರಹ ರೂಪದಲ್ಲಿ ತಿಳಿಸಿರಿ.

## ಭಾಷಾಆಟಗಳು

ಅ .ಮಕ್ಕಳು ವೃತ್ತಾಕಾರವಾಗಿ ನಿಲ್ಲಲಿ. ಅದರಲ್ಲಿ ಒಬ್ಬರಿಗೆ ಒಂದು ವಿಷಯವನ್ನು ಸ್ಪಷ್ಟವಾದ ವಾಕ್ಯದಲ್ಲಿ ಇತರರಿಗೆ ಕೇಳದಂತೆ ಹೇಳಿರಿ. ಆ ವಿದ್ಯಾರ್ಥಿಯು ಅದೇ ವಾಕ್ಯವನ್ನು ಪಕ್ಕದಲ್ಲಿರುವವರಿಗೆ ಗುಟ್ಟಾಗಿ ಹೇಳಲಿ. ಹಾಗೆಯೇ ಆ ವಾಕ್ಯವನ್ನು ಒಬ್ಬರಿಂದ ಒಬ್ಬರಿಗೆ ಹೇಳುತ್ತ ಸಾಗಲಿ. ಕೊನೆಯಲ್ಲಿರುವ ವಿದ್ಯಾರ್ಥಿಯು ತಾನು ಕೇಳಿಸಿಕೊಂಡದ್ದನ್ನು ಜೋರಾಗಿ ಎಲ್ಲರಿಗೂ ಕೇಳುವಂತೆ ಹೇಳಲಿ. ಮೊದಲು ಹೇಳಿದ ವಾಕ್ಯವನ್ನು ಕೊನೆಯ ವಿದ್ಯಾರ್ಥಿ ಹೇಳಿದ ವಾಕ್ಯವನ್ನು ಹೋಲಿಸಿರಿ. ಹೀಗೆಯೇ ಬೇರೆ ಬೇರೆ ವಾಕ್ಯಗಳನ್ನು ಹೇಳುತ್ತ ಆಟ ಆಡಿರಿ.

ಆ. 'ನೀರು ಅತ್ಯಮೂಲ್ಯ ಸಂಪನ್ಮೂಲ' ಈ ವಿಷಯದ ಕುರಿತು ಚರ್ಚಾಸ್ಪರ್ಧೆ ಏರ್ಪಡಿಸಿರಿ.

ಇ. ಜಲಸಂರಕ್ಷಣೆ, ನೀರಿನ ಮೂಲಗಳ ಸ್ವಚ್ಛತೆ ಕುರಿತು ಭಾಷಣ ಮಾಡಿರಿ.



## ಯೋಜನೆ

- ಕರ್ನಾಟಕದಲ್ಲಿ ಹರಿಯುವ ನದಿಗಳ ಹೆಸರನ್ನು ಪಟ್ಟಿಮಾಡಿರಿ.
- ದ.ರಾ.ಬೇಂದ್ರೆಯವರು ಬರೆದ 'ಇಳಿದು ಬಾ ತಾಯಿ' ಕವನವನ್ನು ಸಂಗ್ರಹಿಸಿ ಹಾಡಿರಿ.

## ಓದಿಗೆ ಮನ್ನಣೆ :

- ಜನಪದ ಕಾವ್ಯದಲ್ಲಿ ಬರುವ ಮಳೆಗೆ ಸಂಬಂಧಿಸಿದ ಪದ್ಯಗಳನ್ನು ಸಂಗ್ರಹಿಸಿ ಓದಿರಿ.
- ಮಳೆಯಿಂದ ಭೂಮಿಯ ಮೇಲೆ ಆಗುವ ಪರಿಣಾಮಗಳನ್ನು ತಿಳಿಯಿರಿ.

## ಶುಭ ನುಡಿ :

- ಗಾಳಿ, ನೀರಿಗೆ ಜಾತಿ-ಮತವಿಲ್ಲ.
- ಜಲವು ಸಕಲ ಜೀವರಾಶಿಗಳ ರಕ್ಷಕ.
- ನದಿಗಳು ನಾಗರಿಕತೆಯ ತೊಟ್ಟಿಲು.



# ಮೆರವಣಿಗೆ

ಅದೊಂದು ಭಾನುವಾರ. ಶಾಲೆಯ ಬಾಗಿಲು ತೆರೆದಿತ್ತು. ವಿದ್ಯಾರ್ಥಿಗಳೂ ಶಿಕ್ಷಕರೂ ಯುವಕ ಯುವತಿಯರೂ ಊರಿನ ಹಿರಿಯರೂ ಸೇರಿದರು. ಬರುವುದು ತಡವಾಯಿತಲ್ಲ ಎಂದು ಹಂಪಣ್ಣನೂ ಓಡಿ ಬಂದನು. ಎಲ್ಲರೂ ಶಾಲೆಯ ಅಂಗಳದ ಮರದ ಕೆಳಗೆ ಸೇರಿದರು.




ಸಭೆ ಪ್ರಾರಂಭವಾಯಿತು. ಶಿಕ್ಷಕರು ಎಲ್ಲರನ್ನೂ ಸ್ವಾಗತಿಸಿದರು. ಶಿಕ್ಷಕಿಯರು ಸಭೆ ಕರೆದ ಉದ್ದೇಶವನ್ನು ತಿಳಿಸಿದರು. "ಎಲ್ಲರೂ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸಬೇಕು" ಎಂದು ಕೋರಿದರು. ಮತ್ತೊಬ್ಬ ಶಿಕ್ಷಕರು ಆಗಬೇಕಾದ ಸಿದ್ಧತೆಗಳ ಪಟ್ಟಿಯನ್ನು ಓದಿದರು. "ಇದರಂತೆ ಎಲ್ಲವೂ ಆಗಬೇಕಾಗಿದೆ. ದಯವಿಟ್ಟು ಎಲ್ಲರೂ ಸಕ್ರಿಯವಾಗಿ ಪಾಲ್ಗೊಳ್ಳಬೇಕು" ಎಂದು ಮನವಿ ಮಾಡಿದರು. ಹಂಪಣ್ಣ "ಆಯ್ತು ಸಾರ್" ಎಂದು ಕೂಗಿದನು.

ಶಿಕ್ಷಕರು ತಯಾರಿಸಿದ ಯೋಜನೆ, ಅವರ ಕಾಳಜಿ ಎಲ್ಲರಿಗೂ ಮೆಚ್ಚುಗೆಯಾಯಿತು. ಎಲ್ಲರೂ ಉತ್ಸುಕರಾದರು. ತಾವು ಯಾವ ಕೆಲಸ ಮಾಡುವುದು? ಎಂದು ಯೋಚಿಸಿದರು. ಸಂಗಡಿಗರೊಂದಿಗೆ

ಮಾತನಾಡಿಕೊಳ್ಳಲು ಶುರು ಮಾಡಿದರು. ಸ್ವಲ್ಪ ಸಮಯದ ಅನಂತರ ಮಾತುಗಳು ಕಡಿಮೆಯಾದವು. ಆಗ ಊರಿನ ಹಿರಿಯರೊಬ್ಬರು "ಯಾರು ಯಾರು ಯಾವ ಯಾವ ಸಿದ್ಧತೆಗಳನ್ನು ನಿರ್ವಹಿಸುತ್ತೀರಿ? ಹೇಳಿರಿ" ಎಂದರು.

ಕ್ರೀಡಾಮಂತ್ರಿ ಹಬೀಬ್ "ವಾದ್ಯದ ಜವಾಬ್ದಾರಿಯನ್ನು ನಮ್ಮ ತರಗತಿಯವರು ನಿರ್ವಹಿಸುತ್ತಾರೆ" ಎಂದನು. ಶೈಕ್ಷಣಿಕ ಮಂತ್ರಿ ಡೀನಾ, "ನಮ್ಮ ತರಗತಿಯವರು ಘೋಷಣಾ ಫಲಕಗಳನ್ನು ಸಿದ್ಧಪಡಿಸುತ್ತೇವೆ" ಎಂದಳು.

ದೊಡ್ಡೇಶನು, 'ಕವಿಗಳ ಚಿತ್ರ ನಮ್ಮ ತರಗತಿಯವರದು' ಎಂದನು. 'ಹಾಡು ಮತ್ತು ನೃತ್ಯಕ್ಕೆ ಸಾಂಸ್ಕೃತಿಕ ಸಂಘದವರು ತಯಾರಾಗುತ್ತಾರೆ' ಎಂದಳು ಮಯೂರಿ. 'ಚಿಕ್ಕ ಮಕ್ಕಳಿಗೆ ವೇಷಭೂಷಣಗಳನ್ನು ನಾವು ತೊಡಿಸುತ್ತೇವೆ' ಎಂದನು ಪಿಂಟೋ. 'ಆರತಿಯನ್ನು ನಾವು ಹಿಡಿಯುತ್ತೇವೆ' ಎಂದಳು ಉನ್ನತಿ. 'ಪೂರ್ಣಕುಂಭ ನಾವು ಹೊರುತ್ತೇವೆ' ಎಂದಳು ಡಾಲಿ. 'ಮಂಟಪದ ಅಲಂಕಾರ ನಮಗಿರಲಿ' ಎಂದರು ಯುವಕ ಸಂಘದವರು. 'ಕೋಲಾಟ ಮತ್ತು ಡೊಳ್ಳು ಕುಣಿತ ನಾವು ಮಾಡುತ್ತೇವೆ' ಎಂದರು ಯುವತಿ ಮಂಡಲಿಯವರು. ಎಲ್ಲೆಡೆ ತೋರಣ ಹಾಕಿಸುವ ಮತ್ತು ಎಲ್ಲರಿಗೂ ಉಪಾಹಾರ ಕೊಡಿಸುವ ಜವಾಬ್ದಾರಿಯನ್ನು ಊರಿನ ಹಿರಿಯರು ವಹಿಸಿಕೊಂಡರು.

ಶಿಕ್ಷಕರು ಯೋಜನೆಯ ಪಟ್ಟಿಯಲ್ಲಿ ಜವಾಬ್ದಾರಿ ಹೊತ್ತುಕೊಂಡವರ ಹೆಸರುಗಳನ್ನು ಬರೆದುಕೊಂಡರು. 'ನಾನೇನು ಮಾಡ್ಲಿ ಸಾರ್' ಎಂದು ಎದ್ದು ನಿಂತ ಹಂಪಣ್ಣ ಕೇಳಿದ. 'ಏ, ನೀ ನಮ್ಮ ತಂಡದಲ್ಲಿ ಇದ್ದೀಯಾ ಬ್ಯಾಂಡ್ ಬಾರಿಸೋಕೆ' ಎಂದನು ಹಬೀಬ್. ಹಂಪಣ್ಣನಿಗೆ ಖುಷಿಯಾಯಿತು. ಯೋಜನೆಯಂತೆ ಎಲ್ಲ ಕಾರ್ಯಗಳು ಹಂಚಿಕೆಯಾಗಿದ್ದವು. ಶಿಕ್ಷಕರು ಸಂತಸಗೊಂಡರು. ಪ್ರತಿಯೊಂದು ತಂಡದ ಬಳಿಗೆ ತೆರಳಿ ಸೂಚನೆಗಳನ್ನು ನೀಡಲು ಪ್ರಾರಂಭಿಸಿದರು.

'ಮೊದಲ ತಂಡ ವಾದ್ಯದವರದ್ದು. ಹಬೀಬ್, ನಿಮ್ಮ ತಂಡದಲ್ಲಿ ಹತ್ತು ಜನರಿರಲಿ. ಬೇಸ್ ಡ್ರಂ ಮತ್ತು ಸೈಡ್ ಡ್ರಂ ಬಾರಿಸಲು ಒಬ್ಬೊಬ್ಬರಿರಲಿ. ತುತ್ತೂರಿ, ತಾಳ ಇತ್ಯಾದಿಗಳಿಗೆ ಇಬ್ಬಿಬ್ಬರಿರಲಿ. ಎಲ್ಲರೂ ಒಂದೇ ರೀತಿಯ ವಸ್ತ್ರ ಧರಿಸಿರಬೇಕು. ತುತ್ತೂರಿಯವರು ಮುಂದೆ ಇದ್ದು ಒಂದೊಂದೇ ಹೆಜ್ಜೆ ಹಾಕಬೇಕು. ಒಂದೇ ವೇಗದಲ್ಲಿ ಸಾಗಬೇಕು. ಊರಿನ ಕೆಲವು ಸ್ಥಳಗಳಲ್ಲಿ ನೃತ್ಯ ತಂಡದವರು ನೃತ್ಯ ಮಾಡುವಾಗ ವಾದ್ಯ ನುಡಿಸುವುದನ್ನು ನಿಲ್ಲಿಸಬೇಕು' ಎಂದರು ಶಿಕ್ಷಕರು. ಹಬೀಬ್, 'ಹಾಗೆಯೇ ಆಗಲಿ ಸಾರ್' ಎಂದನು. ಹಂಪಣ್ಣ 'ನಾನು ಸೈಡ್ ಡ್ರಂ' ಎಂದನು. ಅದಕ್ಕೆ ಶಿಕ್ಷಕರು, 'ಆಯ್ತು. ಅದು ಹರಿದು ಹೋಗದಂತೆ ಬಾರಿಸು' ಎಂದರು. ಎಲ್ಲರೂ ನಕ್ಕರು.

"ಈಗ ಎರಡನೆಯ ಸಿದ್ಧತೆ. ಘೋಷಣಾ ಫಲಕಗಳು. ಹಾಂ! ಡೀನಾ, ನಿಮ್ಮ ತರಗತಿಯವರಲ್ಲವೇ? ಎಂಟರಿಂದ ಹನ್ನೆರಡು ಜನರಿರಲಿ. ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಫಲಕವಿರಲಿ. ಅವು ಎರಡು ಅಡಿ ಉದ್ದ ಒಂದು ಅಡಿ ಅಗಲ ಇರಲಿ. ಫಲಕಗಳನ್ನು ಗಟ್ಟಿಯಾದ ರಟ್ಟಿನಿಂದ ತಯಾರಿಸಿರಿ. ಕೋಲಿಗೆ ಭದ್ರವಾಗಿ ಕಟ್ಟಿರಬೇಕು. ಫಲಕಗಳು ಸಿದ್ಧವಾದ ಮೇಲೆ ಏನು ಬರೆಯಬೇಕೆಂದು ಹೇಳುತ್ತೇವೆ. ನೀವು ವಾದ್ಯದವರ ಹಿಂದೆ ಹಿಂದೆ ಹೆಜ್ಜೆ ಹಾಕಬೇಕು. ಎಲ್ಲರೂ ಒಂದೇ ರೀತಿಯ ಉಡುಪು ಧರಿಸಿರಿ. ಹಾಗೆಯೇ ಅಲಂಕಾರವೂ ಕೂಡ ಇರಲಿ. ಆಗಬಹುದೆ?" ಎಂದರು ಶಿಕ್ಷಕರು. ಡಾಲಿ "ಆಗಲಿ ಸರ್" ಎಂದಳು. "ಸಾರ್, ಅವ್ರು ಹಾಕೋ ಡ್ರೆಸ್ಸೇ ನಾವು ಹಾಕಬೇಕಾ ಸಾರ್" ಎಂದನು ಹಂಪಣ್ಣ. "ಅಲ್ಲ ಕಣೋ, ಬಡಿಯುವವರಿಗೆ ಬೇರೆ" ಎಂದಳು ಸುಲೋಚನ. ಶಿಕ್ಷಕರು ಮುಗುಳ್ನಗುತ್ತ "ಬೇರೆ ಬೇರೆ ಇರಲಿ" ಎಂದರು.

ಹೀಗೆಯೇ ಶಿಕ್ಷಕರು ಆಯಾ ಸಿದ್ಧತೆಗಳಿಗೆ ಸಂಬಂಧಿಸಿದಂತೆ ನಿರ್ದೇಶನಗಳನ್ನು ನೀಡಿದರು. ಅನಂತರ ಚರ್ಚೆಗೆ ಅವಕಾಶ ಕೊಟ್ಟರು. ಎಲ್ಲರೂ ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ಹೇಳಿದರು. ಕೆಲವರಿಗೆ ಶಿಕ್ಷಕರು ಮತ್ತೂ ಮತ್ತೂ ವಿವರಣೆ ನೀಡಿದರು. ಹಂಪಣ್ಣ ಎಲ್ಲ ವಿಚಾರಗಳಲ್ಲೂ ಮೂಗು ತೂರಿಸುವುದು ಮರೆಯಲಿಲ್ಲ. ಶಿಕ್ಷಕಿಯರು ಎಲ್ಲರಿಗೂ ವಂದನೆ ಸಲ್ಲಿಸಿದರು. ಎರಡು ಭಾನುವಾರಗಳಲ್ಲಿ ಇಲ್ಲಿಯೇ ಅಭ್ಯಾಸ ನಡೆಸೋಣ ಎಂದರು. ಆಗಲೇ ಎಲ್ಲರೂ ತಮ್ಮ ತಮ್ಮ ಸಿದ್ಧತೆಗಳ ಕುರಿತು ಉತ್ಸಾಹದಲ್ಲಿದ್ದರು.



ಯೋಜನೆಯಂತೆ ಎಲ್ಲವೂ ನಡೆಯಿತು. ನವೆಂಬರ್–೧ ಬಂದೇ ಬಿಟ್ಟಿತು! ಶಿಕ್ಷಕರ ಸೂಚನೆಯಂತೆ ಎಲ್ಲ ತಂಡದವರೂ ಮೆರವಣಿಗೆಗೆ ಸಿದ್ಧವಾಗಿ ಬಂದರು. ಆದರೆ 'ಭುವನೇಶ್ವರಿ ಎಲ್ಲಿ? ಕರ್ನಾಟಕ ಮಾತೆ ಭುವನೇಶ್ವರಿ ಎಲ್ಲಿ?'–ಎಲ್ಲರೂ ಪರಸ್ಪರ ಮಾತನಾಡಿಕೊಂಡರು. ನೋಡುನೋಡುತ್ತಿದಂತೆಯೇ ಮುಚ್ಚಿದ್ದ ಅಧ್ಯಾಪಕರ ಕೊಠಡಿಯ ಬಾಗಿಲು ತೆರೆಯಿತು. ವಿದ್ಯಾರ್ಥಿಗಳ ಹಾಗೂ ಅಧ್ಯಾಪಕರ ಮೆಚ್ಚಿನ ಹಸೀನಾ ಕರ್ನಾಟಕ ಮಾತೆ ಭುವನೇಶ್ವರಿಯಾಗಿ ಕೊಠಡಿಯಿಂದ ಹೊರಬಂದು ರಥವೇರಿ ನಿಂತಳು! ಮೆರವಣಿಗೆ ಹೊರಟಿತು. ಎಲ್ಲರೂ 'ಕರ್ನಾಟಕ ಮಾತೆ ಭುವನೇಶ್ವರಿಗೆ ಜಯವಾಗಲಿ' ಎಂದರು. "ಎಂಥ ಅಪೂರ್ವ ದೃಶ್ಯ! ನೋಡಲು ಎರಡು ಕಣ್ಣುಗಳು ಸಾಲವು. ಯಾವ ದಸರೆಗೂ ಕಡಿಮೆ ಇಲ್ಲ" ಎಂದು ಜನರು ಮಾತನಾಡುತ್ತಿದ್ದರು. ಕೆಲವರಿಗೆ ಮಾತೇ ಹೊರಡಲಿಲ್ಲ. ಇನ್ನು ಕೆಲವರು ಅಬ್ಬಬ್ಬಾ! ಎಂದು ಬೆರಗಾದರು. ಹಂಪಣ್ಣನಿಗೆ ಎಲ್ಲರೂ ತನ್ನನ್ನು ನೋಡಬೇಕೆಂಬ ಆಸೆ. ವಿವಿಧ ಭಂಗಿಯಲ್ಲಿ ಬ್ಯಾಂಡ್ ಬಾರಿಸಿದ. ಬೀಗುತ್ತಾ ಹೆಜ್ಜೆ ಹಾಕಿದ.

ಭವ್ಯ ಮೆರವಣಿಗೆ ವಿಜೃಂಭಣೆಯಿಂದ ಸಾಗಿದೆ. ತಾಯಿ ಭುವನೇಶ್ವರಿಯ ಭವ್ಯತೆಗೆ ಜನರೆಲ್ಲ ಕೈ ಮುಗಿಯುತ್ತಿದ್ದಾರೆ. ಮನಸಾರೆ ನಮಿಸುತ್ತಿದ್ದಾರೆ. ತಾಯಿ ನಗುತ್ತ ಎಲ್ಲರನ್ನೂ ಹರಸುತ್ತಿದ್ದಾಳೆ.... ಮೆರವಣಿಗೆ ಸಾಗಿದೆ...... ಸಾಗಿದೆ... ಸಾಗುತ್ತಲೇ ಇದೆ......

**ಕ್ಷೇತ್ರ** : ಆಲಿಸುವುದು.

**ಸಾಮರ್ಥ್ಯ** : ಗುಂಪು ಚಟುವಟಿಕೆಯ ನಿರ್ದೇಶನಗಳನ್ನು ಆಲಿಸಿ ಕಾರ್ಯರೂಪಕ್ಕೆ ತರುವುದು.

**ಆಶಯ :**

ನೂರಾರು ಕೈಗಳು ಸೇರಿದರೆ ಒಂದು ಮಹತ್ಕಾರ್ಯ ಸಾಧ್ಯವಾಗುತ್ತದೆ. ಸಾರ್ವಜನಿಕ ಕಾರ್ಯಗಳಲ್ಲಿ ಎಲ್ಲರೊಟ್ಟಿಗೆ ಬೆರೆತಾಗ ನಾವು ಸಮಾಜಜೀವಿ ಎನಿಸಿಕೊಳ್ಳುತ್ತೇವೆ. ಜವಾಬ್ದಾರಿ ಹೊರಲು ಸದಾ ಸಿದ್ಧರಾಗಿರಬೇಕು. ಹೊತ್ತ ಜವಾಬ್ದಾರಿಯನ್ನು ಶ್ರದ್ಧೆಯಿಂದ ನಿರ್ವಹಿಸಬೇಕು. ಆಗ ಆ ಕಾರ್ಯ ಯಶಸ್ವಿಯಾಗುತ್ತದೆ. ಉತ್ತಮ ಕಾರ್ಯಗಳಲ್ಲಿ ಎಲ್ಲರೂ ಪಾಲ್ಗೊಳ್ಳಬೇಕು. ಆ ಮೂಲಕ ಅಳಿಲು ಸೇವೆಯ ಮನೋಭಾವನೆಯನ್ನು ಬೆಳೆಸುವುದು ಸಾಧ್ಯವಾಗುತ್ತದೆ.

## ಅರ್ಥ ತಿಳಿಯಿರಿ :

ತಡ–ನಿಧಾನ, ವಿಳಂಬ. ಸಲಹೆ– ಅಭಿಪ್ರಾಯ, ಆಲೋಚನೆ. ಸೂಚನೆ – ತಿಳಿಸುವಿಕೆ, ಸೂಚಿಸುವಿಕೆ. ಕೋರು–ಕೇಳಿಕೊಳ್ಳು, ಬೇಡು. ಸಿದ್ಧತೆ–ತಯಾರು, ಸಜ್ಜು. ಪಟ್ಟಿ–ಯಾದಿ, ವಿವರಣೆಯ ಬರೆಹ. ನಿರ್ವಹಿಸು– ನಿಭಾಯಿಸು, ಪೂರೈಸು. ಅಲಂಕಾರ–ಸಿಂಗಾರ, ಸೊಗಸು. ಹಂಚಿಕೆ–ಹಂಚುವಿಕೆ, ಪಾಲು ಮಾಡುವಿಕೆ. ಬಡಿ–ಬಾರಿಸು, ಪೆಟ್ಟು ಹಾಕು. ಹೆಜ್ಜೆ ಹಾಕು–ಚಲಿಸು, ನಡೆ. ಅನಿಸಿಕೆ– ಅಭಿಪ್ರಾಯ, ಅಭಿಮತ. ಭಂಗಿ– ಹಾವಭಾವ, ವಿನ್ಯಾಸ. ಬೀಗು– ಉಬ್ಬು, ಹೆಮ್ಮೆತಾಳು. ಭವ್ಯ–ವಿಜೃಂಭಣೆ, ವೈಭವ.

## ವಿವರ ತಿಳಿಯಿರಿ :

| | |
|---|---|
| ಸಕ್ರಿಯವಾಗಿ | : ಚಟುವಟಿಕೆಯಿಂದ ಕೂಡಿ, ಕ್ರಿಯಾತ್ಮಕವಾಗಿ. |
| ಯೋಜನೆ | : ಕರ್ತವ್ಯಗಳ ರೂಪುರೇಷೆಯ ಸಿದ್ಧತೆ. |
| ವಾದ್ಯ | : ಧ್ವನಿ ಮಾಡುವ ಉಪಕರಣಗಳು, ನುಡಿಸುವ ಸಾಧನ. |
| ಸಾಂಸ್ಕೃತಿಕ ಸಂಘ | : ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಕಟ್ಟಿಕೊಂಡ ಸಮಿತಿ. |
| ಮೂಗು ತೂರಿಸುವುದು | : ವಿಚಾರಗಳ ಬಗ್ಗೆ ಅನಗತ್ಯ ಅಭಿಪ್ರಾಯ ಹೇಳುವುದು. |
| ವೇಷಭೂಷಣ | : ಉಡುಗೆ ತೊಡುಗೆಯ ಅಲಂಕಾರ. |
| ಪೂರ್ಣಕುಂಭ | : ಮಂಗಳ ಸೂಚಕವಾಗಿ ಬಳಸುವ ನೀರು ತುಂಬಿದ ಕೊಡ. |
| ಯುವತಿ ಮಂಡಲ | : ನಿರ್ದಿಷ್ಟ ಉದ್ದೇಶಕ್ಕಾಗಿ ರಚಿಸಿದ ತರುಣಿಯರ ಸಂಘ. |
| ಪೂರ್ವಪ್ರದರ್ಶನ | : ಅಭ್ಯಾಸ ಮಾಡಿದ್ದನ್ನು ನಿಗದಿತ ಕಾರ್ಯಕ್ರಮಕ್ಕೆ ಮುಂಚಿತವಾಗಿ ತೋರಿಸುವುದು. |

## ವ್ಯಾಕರಣ ಮಾಹಿತಿ

### ದ್ವಿರುಕ್ತಿ

**ಕೆಳಗಿನ ವಾಕ್ಯಗಳನ್ನು ಗಮನಿಸಿರಿ :**

- ಶಿಕ್ಷಕರು ಮತ್ತೂ ಮತ್ತೂ ವಿವರಣೆ ನೀಡಿದರು.
- ಷರೀಫನು ನಗುತ್ತ ನಗುತ್ತ ಮಾತನಾಡಿದನು.

ಮೇಲಿನ ವಾಕ್ಯಗಳಲ್ಲಿ 'ಮತ್ತೂ', 'ನಗುತ್ತ' ಎಂಬ ಪದಗಳು ಎರಡೆರಡು ಬಾರಿ ಬಳಕೆಯಾಗಿವೆ. ಇವುಗಳನ್ನು 'ದ್ವಿರುಕ್ತಿ' ಎನ್ನುವರು.

(ದ್ವಿ–ಎರಡು, ಉಕ್ತಿ–ಮಾತು)

ಸಾಮಾನ್ಯವಾಗಿ ವಿಷಯಕ್ಕೆ ಒತ್ತುಕೊಡಲು ದ್ವಿರುಕ್ತಿಗಳನ್ನು ಬಳಸುತ್ತಾರೆ. ಇನ್ನೂ ಕೆಲವು ಉದಾಹರಣೆಗಳನ್ನು ನೋಡೋಣ.

- ಇತ್ತ ಕಡೆಗೆ ಬೇಗಬೇಗ ಬಾ.
- ಗುಡ್ಡಗಳಲ್ಲಿ ದೊಡ್ಡದೊಡ್ಡ ಕಲ್ಲುಗಳಿವೆ.

ಇಲ್ಲಿ 'ಬೇಗಬೇಗ', 'ದೊಡ್ಡದೊಡ್ಡ' ಎಂಬ ಪದಗಳು ದ್ವಿರುಕ್ತಿಗಳಾಗಿವೆ.



### ಜೋಡುನುಡಿ :

**ಕೆಳಗಿನ ವಾಕ್ಯಗಳನ್ನು ಗಮನಿಸಿರಿ :**

- "ಚಿಕ್ಕ ಮಕ್ಕಳಿಗೆ ವೇಷಭೂಷಣಗಳನ್ನು ನಾವು ತೊಡಿಸುತ್ತೇವೆ" ಎಂದನು ಪಿಂಟೋ.
- ಉಪವಾಸದ ರಾತ್ರಿ ಹಣ್ಣುಹಂಪಲು ತಿನ್ನುತ್ತಾರೆ.

ಮೇಲಿನ ವಾಕ್ಯಗಳಲ್ಲಿ 'ವೇಷಭೂಷಣ', 'ಊಟೋಪಚಾರ' – ಈ ಪದಗಳಲ್ಲಿ ಎರಡು ಬೇರೆಬೇರೆ ಪದಗಳಿದ್ದು ಅವು ಜೊತೆಜೊತೆಯಾಗಿ ಬಳಕೆಯಾಗಿವೆ. ಇವು ಜೋಡುನುಡಿಗಳು.

ಸಾಮಾನ್ಯವಾಗಿ ಮಾತುಗಳನ್ನು, ವಿಷಯಗಳನ್ನು ಮೆರುಗುಗೊಳಿಸಲು ಜೋಡುನುಡಿಗಳನ್ನು ಬಳಸುತ್ತಾರೆ. ಇನ್ನೂ ಕೆಲವು ಉದಾಹರಣೆಗಳನ್ನು ನೋಡೋಣ.

- ಎಲ್ಲರೂ ತಮ್ಮ ನೋವುನಲಿವುಗಳನ್ನು ಹಂಚಿಕೊಂಡರು.
- ಅವರು ಊರುಕೇರಿ ತಿರುಗಿ ಬಂದರು.

ಇಲ್ಲಿ 'ನೋವುನಲಿವು,' 'ಊರುಕೇರಿ' ಎಂಬ ಪದಗಳು ಜೋಡುನುಡಿಗಳಾಗಿವೆ.

**ಅನುಕರಣಾವ್ಯಯ :**

**ಕೆಳಗಿನ ವಾಕ್ಯಗಳನ್ನು ಗಮನಿಸಿರಿ.**

- ಹಂಪಣ್ಣನು ಸರಸರ ಹೆಜ್ಜೆ ಹಾಕಿದನು.
- ಗಾಳಿಯು ಸುಯ್ಯನೆ ಬೀಸಿತು.

ಮೇಲಿನ ವಾಕ್ಯಗಳಲ್ಲಿ 'ಸರಸರ,' 'ಸುಯ್ಯನೆ' ಈ ಪದಗಳಿಗೆ ನಿರ್ದಿಷ್ಟವಾದ ಅರ್ಥವಿಲ್ಲ. ಇವು ಧ್ವನಿವಿಶೇಷಣವನ್ನು ಅನುಕರಣ ಮಾಡಿದವುಗಳಾಗಿವೆ. ಇವು ಅನುಕರಣಾವ್ಯಯಗಳು.

ಸಾಮಾನ್ಯವಾಗಿ ಧ್ವನಿವಿಶೇಷಣಗಳನ್ನು ಕೇಳಿದಂತೆ ಪುನಃ ಅನುಕರಣೆ ಮಾಡುವಾಗ ಅನುಕರಣಾವ್ಯಯಗಳನ್ನು ಬಳಸುತ್ತಾರೆ. ಇನ್ನೂ ಕೆಲವು ಉದಾಹರಣೆಗಳನ್ನು ನೋಡೋಣ

- ಮಳೆಯ ಹನಿಗಳು ಪಟಪಟನೆ ಬಿದ್ದವು.
- ನೀರು ಜುಳುಜುಳು ಎಂದು ಹರಿಯಿತು.

ಇಲ್ಲಿ **'ಪಟಪಟನೆ', 'ಜುಳುಜುಳು'** ಎಂಬ ಪದಗಳು ಅನುಕರಣಾವ್ಯಯಗಳಾಗಿವೆ.

## ಅಭ್ಯಾಸಗಳು



**ಅ. ಗುಂಪಿಗೆ ಸೇರದ ಪದಗಳನ್ನು ಆಯ್ದು ಬರೆಯಿರಿ.**

೧. ಹಬೀಬ್, ದೊಡ್ಡೇಶ, ರವಿ, ಹಂಪಣ್ಣ.

೨. ಕಲ್ಪನ, ಉನ್ನತಿ, ಡಾಲಿ, ಡೀನಾ

೩. ವಾದ್ಯ, ಘೋಷಣಾ ಫಲಕ, ನೃತ್ಯ, ಜಾತ್ರೆ

**ಆ. ಪದಗಳ ಅರ್ಥ ಬರೆಯಿರಿ.**

೧. ಸಿದ್ಧತೆ  ೨. ಅಲಂಕಾರ–  ೩. ಖುಷಿ  ೪. ರಾಶಿ

**ಇ. ಕೆಳಗಿನ ವಾಕ್ಯಗಳನ್ನು ಸರಿಪಡಿಸಿ ಬರೆಯಿರಿ.**

೧. ಸಕ್ರಿಯವಾಗಿ ದಯವಿಟ್ಟು ಪಾಲ್ಗೊಳ್ಳಬೇಕು ಎಲ್ಲರೂ

೨. ಅದು ಆಯ್ತು ಬಾರಿಸು ಹೋಗದಂತೆ ಹರಿದು

೩. ಮತ್ತೂ ನೀಡಿದರು ಮತ್ತೂ ಶಿಕ್ಷಕರು ವಿವರಣೆ

೪. ಭವ್ಯತೆಗೆ ತಾಯಿ ಜನರೆಲ್ಲ ಭುವನೇಶ್ವರಿಯ ಮುಗಿಯುತ್ತಿದ್ದಾರೆ ಕೈ

**ಈ. ಪದಗಳನ್ನು ಬಳಸಿ ಸ್ವಂತ ವಾಕ್ಯ ರಚಿಸಿರಿ.**

೧. ಕಾಳಜಿ  ೨. ಜವಾಬ್ದಾರಿ  ೩. ಮೆರವಣಿಗೆ  ೪. ಗ್ರಂಥಾಲಯ

ಉ. ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಶಿಕ್ಷಕರು ಏನನ್ನು ತಯಾರಿಸಿದ್ದರು?

೨. ಹಬೀಬ್ ಯಾವ ಜವಾಬ್ದಾರಿಯನ್ನು ವಹಿಸಿಕೊಂಡನು?

೩. ಉಪಾಹಾರ ಕೊಡಿಸುವ ಜವಾಬ್ದಾರಿಯನ್ನು ಯಾರು ವಹಿಸಿಕೊಂಡರು?

೪. ಶಿಕ್ಷಕರು ಏಕೆ ಸಂತಸಗೊಂಡರು?

೫. ಹಂಪಣ್ಣ ಹೇಗೆ ಬ್ಯಾಂಡ್ ಬಾರಿಸುತ್ತಿದ್ದನು?

ಊ. ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಶಿಕ್ಷಕರು ಸಭೆ ಕರೆದ ಉದ್ದೇಶವನ್ನು ತಿಳಿಸಿರಿ?

೨. ಶಿಕ್ಷಕರು ವಾದ್ಯ ತಂಡದವರಿಗೆ ನೀಡಿದ ಸೂಚನೆಗಳು ಯಾವುವು?

೩. ಭುವನೇಶ್ವರಿಯ ಮೆರವಣಿಗೆಯ ಬಗ್ಗೆ ಜನರ ಮಾತುಗಳೇನು?

ಋ. ಕೆಳಗಿನ ವಾಕ್ಯಗಳಲ್ಲಿ ಜೋಡುನುಡಿಗಳನ್ನು ಗುರುತಿಸಿ ಬರೆಯಿರಿ.

೧. ನಮ್ಮ ನೆರೆಹೊರೆಯವರು ಬಹಳ ಒಳ್ಳೆಯವರು.

೨. ಅಮ್ಮ ರಾತ್ರಿ ಹಗಲು ಕೆಲಸ ಮಾಡುತ್ತಾಳೆ.

೩. ನಾಟಕದಲ್ಲಿ ವಿಧವಿಧವಾದ ಉಡುಗೆತೊಡುಗೆ ಧರಿಸುತ್ತಾರೆ.

ಎ. ಸರಿಹೊಂದುವ ಬಿಡಿ ಪದಗಳನ್ನು ಸೇರಿಸಿ ಜೋಡುನುಡಿ ಸೇರಿಸಿರಿ.

ಆಟ, ತಿಂಡಿ, ಹೊರಗೆ, ದಿಕ್ಕು, ತೀರ್ಥ, ಪಕ್ಕ, ದೆಸೆ, ಒಳಗೆ, ಅಕ್ಕ, ಕೊಳ್ಳ, ಪಾಠ, ಹಳ್ಳ,



ಭಾಷಾಆಟಗಳು

ಅ. ಕೊಟ್ಟಿರುವ ನಿರ್ದೇಶನಗಳನ್ನು ಗಮನಿಸಿರಿ. ಅದರಂತೆ ಗುಂಪುಗಳಲ್ಲಿ ಕಾರ್ಯನಿರ್ವಹಿಸಿ ಕನ್ನಡ ವರ್ಣಮಾಲೆ ಚಾರ್ಟ್ ತಯಾರಿಸಿರಿ.

೧. ೨೧ x ೨೦ಸೆ.ಮೀ. ಅಳತೆಯ ಬಿಳಿ ಹಾಳೆಯನ್ನು ತೆಗೆದುಕೊಳ್ಳಿರಿ. (ಎ೨-ಎ೩ ಸೈಜ್)

೨. ಸುತ್ತಲೂ ೧ ಸೆ.ಮೀ.ನಷ್ಟು ಜಾಗಬಿಟ್ಟು ಗೆರೆ (ಬಾರ್ಡರ್) ಹಾಕಿರಿ.

೩. ಮೇಲಿನಿಂದ ಕೆಳಗೆ ೫ಭಾಗ ಮಾಡಿಕೊಂಡು ಅಡ್ಡಲಾಗಿ ಗೆರೆ ಎಳೆಯಿರಿ.

ಅಳತೆ : ಭಾಗ-೧ – ೨ಸೆ. ಮೀ.

ಭಾಗ-೨ – ೬ಸೆ.ಮೀ

ಭಾಗ-೩ – ೪ಸೆ.ಮೀ

ಭಾಗ-೪ – ೧೪ಸೆ.ಮೀ.

ಭಾಗ-೫ – ೨ಸೆ.ಮೀ.

೪. ಭಾಗ ೧ ರಲ್ಲಿ 'ಕನ್ನಡ ವರ್ಣಮಾಲೆ' ಎಂದು ದೊಡ್ಡದಾಗಿ ಬರೆಯಿರಿ

೫. ಭಾಗ ೨ ರಲ್ಲಿ 'ಸ್ವರಗಳು' ಎಂದು ಶೀರ್ಷಿಕೆ ಬರೆದು ಕೆಳಗಡೆ ೧೩ ಸ್ವರಗಳನ್ನು ಕ್ರಮವಾಗಿ ಬರೆಯಿರಿ.

೬. ಭಾಗ ೩ ರಲ್ಲಿ 'ಯೋಗವಾಹಗಳು' ಎಂದು ಶೀರ್ಷಿಕೆ ಬರೆದು ಕೆಳಗೆ ೨ ಯೋಗವಾಹಗಳನ್ನು ಕ್ರಮವಾಗಿ ಬರೆಯಿರಿ.

೭. ಭಾಗ ೪ ರಲ್ಲಿ 'ವ್ಯಂಜನಗಳು' ಶೀರ್ಷಿಕೆ ಬರೆದು ಕೆಳಗೆ ಮೊದಲು ವರ್ಗೀಯ ವ್ಯಂಜನಗಳನ್ನು, ಅನಂತರ ಅವರ್ಗೀಯ ವ್ಯಂಜನಗಳನ್ನು ಬರೆಯಿರಿ.

೮. ಭಾಗ ೫ ರಲ್ಲಿ ನಿಮ್ಮ ಗುಂಪಿನ ಎಲ್ಲರ ಹೆಸರುಗಳನ್ನು ಬರೆಯಿರಿ.

೯. ಹಾಳೆಯನ್ನು ರಟ್ಟಿಗೆ ಅಂಟಿಸಿ , ದಾರ ಕಟ್ಟಿ ತರಗತಿಯಲ್ಲಿ ನೇತು ಹಾಕಿ ಪ್ರದರ್ಶಿಸಿರಿ.

೧೦. ಪ್ರತಿ ಭಾಗದಲ್ಲಿ ಒಂದೊಂದು ಬಣ್ಣದ ಪೆನ್ನನ್ನು ಬಳಸಿ ಬರೆಯಿರಿ.

## ಯೋಜನೆ

- ವಿವಿಧ ಸಂದರ್ಭದ ಮೆರವಣಿಗೆಯ ಚಿತ್ರಗಳನ್ನು ಸಂಗ್ರಹಿಸಿ ಆಲ್ಬಂ ತಯಾರಿಸಿರಿ
- ಪತ್ರಿಕೆಗಳಲ್ಲಿ ಬರುವ ಪದಬಂಧಗಳನ್ನು ಸಂಗ್ರಹಿಸಿ ಗುಂಪಿನಲ್ಲಿ ಪೂರ್ಣಗೊಳಿಸಿರಿ.

## ಓದಿಗೆ ಮನ್ನಣೆ :

- ಜಂಬೂಸವಾರಿಯ ಕುರಿತಾದ ಲೇಖನಗಳನ್ನು ಓದಿರಿ.
- ಒಟ್ಟಾಗಿ ಕೆಲಸಮಾಡಿ ಯಶಸ್ಸನ್ನು ಸಾಧಿಸಿದ ವಿಷಯಗಳನ್ನು ಕುರಿತು ಓದಿರಿ.
- ಹಿರಿಯರ ಮಾತಿನಂತೆ ನಡೆದು ಪ್ರಗತಿ ಸಾಧಿಸಿದ ವ್ಯಕ್ತಿಗಳ ಕುರಿತು ಓದಿರಿ.

## ಶುಭ ನುಡಿ :

- ಒಂದಾಗಿ ಶ್ರಮಿಸಿರಿ, ಸಂಭ್ರಮವನ್ನು ಪಡೆಯಿರಿ.
- ನಾಯಕನನ್ನು ಪರೀಕ್ಷಿಸು, ಅನಂತರ ಒಪ್ಪಿಕೊಳ್ಳು.
- ಮಹತ್ಕಾರ್ಯದ ಸಾಧನೆಯ ಹಿಂದೆ ಪರಿಶ್ರಮವಿರುತ್ತದೆ.



ಗದ್ಯ ಪಾಠ–೩

# ಗೆಳೆತನ





ಒಂದಾನೊಂದು ಕಾಲದಲ್ಲಿ ಒಂದು ದಟ್ಟವಾದ ಅರಣ್ಯವಿತ್ತು. ಅದರ ಮಧ್ಯಭಾಗದಲ್ಲಿ ಸುಂದರವಾದ ಒಂದು ಮಡುವಿತ್ತು. ಅದರಲ್ಲಿ 'ಮಂಥರಕ' ಎಂಬ ಆಮೆ ವಾಸವಾಗಿತ್ತು. ಮಡುವಿನ ಪಕ್ಕದಲ್ಲಿ ಒಂದು ಬಿಲದೊಳಗೆ 'ಹಿರಣ್ಯರೋಮ' ಎಂಬ ಮೂಷಿಕವು ಮನೆಮಾಡಿಕೊಂಡಿತ್ತು. ಹತ್ತಿರದ ಮರವೊಂದರಲ್ಲಿ 'ಲಘುಪತನಕ' ಎಂಬ ಕಾಗೆಯು ಗೂಡು ಕಟ್ಟಿಕೊಂಡಿತ್ತು. ಈ ಮೂವರು ಆತ್ಮೀಯ ಗೆಳೆಯರಾಗಿದ್ದರು. ಇವರು ಪರಸ್ಪರ ಕಷ್ಟ ಸುಖಗಳನ್ನು ಹಂಚಿಕೊಂಡು ಅನ್ಯೋನ್ಯವಾಗಿದ್ದರು.

ಒಂದು ದಿನ ಮೂವರೂ ಮಡುವಿನ ದಡದಲ್ಲಿ ಮಾತನಾಡುತ್ತಾ ಕುಳಿತಿದ್ದರು. ಇದ್ದಕ್ಕಿದ್ದಂತೆ ಅಲ್ಲಿಗೆ 'ಚಿತ್ರಾಂಗ' ಎಂಬ ಸಾರಂಗವು ಓಡುತ್ತ ಬಂದಿತು! ಅದು ಗಾಬರಿಯಿಂದ ಹಿಂದಕ್ಕೆ ನೋಡುತ್ತ ನಡುಗುತ್ತ ನಿಂತಿತು. 'ಸಾರಂಗವು ಏಕೆ ಹೀಗೆ ಗಾಬರಿಯಾಗಿದೆ!' ಎಂದು ಮೂವರು ಗೆಳೆಯರು ಮಾತನಾಡಿಕೊಂಡರು. ಲಘುಪತನಕವು 'ಯಾರೋ ಬೆನ್ನಟ್ಟಿ ಬರಲು ಭಯಗ್ರಸ್ತನಾಗಿರಬೇಕು' ಎಂದಿತು. ತಕ್ಷಣ ಅದು ಮೇಲಕ್ಕೆ ಹಾರಿ ಹೋಗಿ ಸುತ್ತಲೂ ನೋಡಿತು. ಯಾರೂ ಕಾಣಿಸಲಿಲ್ಲ.

ಕಾಗೆಯು ಸಾರಂಗದ ಬಳಿಗೆ ಬಂದು, "ಏನಯ್ಯಾ! ಏಕಿಷ್ಟು ಗಾಬರಿಯಾಗಿರುವೆ?" ಎಂದು ಕೇಳಿತು. ಅದಕ್ಕೆ ಚಿತ್ರಾಂಗವು "ನನ್ನನ್ನು ಬೇಡರು ಬೆನ್ನಟ್ಟಿದರು. ಓಡಿ ಓಡಿ ಬಳಲಿದ್ದೇನೆ. ಬಾಯಾರಿಕೆಯಿಂದ ನೀರು ಕುಡಿಯಲು ಇಲ್ಲಿಗೆ ಬಂದೆನು" ಎಂದಿತು. ಆಗ ಕಾಗೆಯು "ಇಲ್ಲಿ ಭಯವಿಲ್ಲ, ನಿಶ್ಚಿಂತೆಯಿಂದ ನೀರು

ಕುಡಿ" ಎಂದಿತು. ನೀರು ಕುಡಿದ ಚಿತ್ರಾಂಗಕ್ಕೆ ಸ್ವಲ್ಪ ಸಮಾಧಾನವಾಯಿತು. ಚಿತ್ರಾಂಗವು ಲಘುಪತನಕನ ಸ್ನೇಹ ಬಯಸಿತು. ಮೂವರು ಗೆಳೆಯರು ತಮ್ಮಲ್ಲಿ ಮಾತನಾಡಿಕೊಂಡು ಒಪ್ಪಿಗೆ ಸೂಚಿಸಿದರು. ಅಂದಿನಿಂದ ನಾಲ್ವರೂ ಗೆಳೆಯರಾದರು ಹಾಗೂ ಸುಖವಾಗಿ ಜೀವನ ನಡೆಸುತ್ತಿದ್ದರು.

ಒಂದು ದಿನ ಚಿತ್ರಾಂಗವು ಆಹಾರ ಹುಡುಕುತ್ತ, ಸಂಚರಿಸುತ್ತಿತ್ತು. ಆಕಸ್ಮಿಕವಾಗಿ ಬೇಡರು ಒಡ್ಡಿದ ಬಲೆಯಲ್ಲಿ ಸಿಕ್ಕಿಬಿದ್ದಿತು. ಇದನ್ನು ನೋಡಿದ ಲಘುಪತನಕವು ಗಾಬರಿಗೊಂಡಿತು. ಕೂಡಲೇ ಹೋಗಿ ಮಂಥರಕ ಮತ್ತು ಹಿರಣ್ಯರೋಮನಿಗೆ ವಿಷಯ ತಿಳಿಸಿತು. ಮೂರೂ ಬೇಗ ಬೇಗನೆ ಚಿತ್ರಾಂಗನಲ್ಲಿಗೆ ಬಂದವು. ಹಿರಣ್ಯರೋಮವು ಪಾಶವನ್ನು ಹರಿದು ಚಿತ್ರಾಂಗವನ್ನು ಬಂಧಮುಕ್ತಗೊಳಿಸಿತು. ಅಷ್ಟರಲ್ಲಿ ಅದೇ ಸಮಯಕ್ಕೆ ಬೇಡನು ಅಲ್ಲಿಗೆ ಬಂದು ಬಿಟ್ಟನು.



ಬೇಡನನ್ನು ಕಂಡು ಎಲ್ಲರಿಗೂ ಬಲು ಗಾಬರಿಯಾಯಿತು. ಲಘುಪತನಕ ಮರದ ಮೇಲಕ್ಕೆ ಹಾರಿತು. ಹಿರಣ್ಯರೋಮ ಪಕ್ಕದಲ್ಲಿದ್ದ ಬಿಲವನ್ನು ಸೇರಿಕೊಂಡಿತು. ಚಿತ್ರಾಂಗ ವೇಗವಾಗಿ ಓಡಿಹೋಯಿತು. ಆದರೆ ಮಂಥರಕನಿಗೆ ದಿಕ್ಕುತೋಚದಾಯಿತು. ತಕ್ಷಣ ದೇಹವನ್ನು ಸಂಕುಚಿತಗೊಳಿಸಿಕೊಂಡಿತು. ಅಲ್ಲಿಗೆ ಬಂದ ಬೇಡನು ತುಂಡಾಗಿದ್ದ ಬಲೆಯನ್ನು ನೋಡಿ ಬೆರಗಾದನು. ಪಕ್ಕದಲ್ಲಿ ಮುದುರಿಕೊಂಡಿದ್ದ ಆಮೆ ಆತನ ಕಣ್ಣಿಗೆ ಬಿದ್ದಿತು. ಬೇರೆ ಏನನ್ನೂ ಕಾಣದ ಬೇಡನು ಆಮೆಯನ್ನೂ ತುಂಡಾಗಿದ್ದ ಬಲೆಯನ್ನೂ ತೆಗೆದುಕೊಂಡು ಹೊರಟುಬಿಟ್ಟನು.

ಇದನ್ನು ನೋಡಿದ ಹಿರಣ್ಯರೋಮ, ಲಘುಪತನಕ ಮತ್ತು ಚಿತ್ರಾಂಗ ಒಟ್ಟಿಗೆ ಸೇರಿದರು. ಗೆಳೆಯನನ್ನು ಅಗಲಿ ದುಃಖಿತರಾದರು. 'ತನ್ನಿಂದಾಗಿಯೇ ಗೆಳೆಯ ಕಷ್ಟದಲ್ಲಿ ಸಿಲುಕಿದನು' ಎಂದು ಚಿತ್ರಾಂಗವು ಮರುಗಿತು. 'ಮಂಥರಕನಿಗಾದ ಗತಿ ನನಗಾಗಲಿ' ಎಂದು ಕಣ್ಣೀರು ಹಾಕಿತು. ಗೆಳೆಯರೆಲ್ಲರೂ ಬಹಳವಾಗಿ ಚಿಂತಿತರಾದರು. ಗೆಳೆಯನನ್ನು ಹೇಗಾದರೂ ಮಾಡಿ ರಕ್ಷಿಸಲೇಬೇಕೆಂದು ಚರ್ಚಿಸಿದವು. ಆಗ ಹಿರಣ್ಯರೋಮವು ಒಂದು ಉಪಾಯವನ್ನು ಸೂಚಿಸಿತು. ಅದರಂತೆ ಲಘುಪತನಕ ಮತ್ತು ಚಿತ್ರಾಂಗ ಅಲ್ಲಿಂದ ಹೊರಟು ಬಿಟ್ಟವು.

ಲಘುಪತನಕ ಮತ್ತು ಚಿತ್ರಾಂಗ ಬೇಡನಿಗಿಂತಲೂ ಮುಂದೆ ಹೋದವು. ಅಲ್ಲಿ ನದಿಯ ದಡದಲ್ಲಿ ಚಿತ್ರಾಂಗ ಸತ್ತಂತೆ ಬಿದ್ದುಕೊಂಡಿತು. ಲಘುಪತನಕವು ಅದರ ಮೇಲೆ ಹಾರಾಡತೊಡಗಿತು. ಆ ಕಡೆಯೇ ಬರುತ್ತಿದ್ದ ಬೇಡನಿಗೆ ಈ ದೃಶ್ಯ ಕಂಡಿತು. ಸಾರಂಗವೊಂದು ಸತ್ತು ಬಿದ್ದಿದೆ ಎಂದು ಅತ್ಯಂತ ಮೋಹಿತನಾದನು. ಕೂಡಲೆ ಮಂಥರಕನನ್ನೂ, ಬಲೆಯನ್ನೂ ನೆಲಕ್ಕಿಳಿಸಿ ಜಿಂಕೆಯ ಕಡೆಗೆ ಹೊರಟನು.





ಬೇಡನ ಆಗಮನವನ್ನು ಕಂಡು ಲಘುಪತನಕವು ಕೂಡಲೆ ಮಂಥರಕನ ಬಳಿಗೆ ಬಂದು, 'ಬೇಗನೆ ಮಡುವನ್ನು ಸೇರಿಕೋ' ಎಂದು ಹೇಳಿತು. ಗೆಳೆಯನ ಧ್ವನಿಯನ್ನು ಕೇಳಿದ ಮಂಥರಕವು ಸಂತೋಷಗೊಂಡು ಹಾಗೆಯೇ ಮಾಡುವೆನೆಂದಿತು. ತಕ್ಷಣ ಹೊರಟು ಬಹುಬೇಗನೆ ಮಡುವನ್ನು ಸೇರಿಕೊಂಡಿತು. ಇತ್ತ ಬೇಡನು ಹತ್ತಿರಕ್ಕೆ ಬರುತ್ತಿದ್ದಂತೆ ಚಿತ್ರಾಂಗನು ಎದ್ದು ಓಡಿಹೋಯಿತು. ಇದೆಲ್ಲವನ್ನು ಕಂಡ ಬೇಡನು ತಳಮಳಗೊಂಡು ಇದೇನೋ ಒಂದು ಉತ್ಪಾತವಿರಬೇಕೆಂದು ಹೆದರಿ ಬಲೆಯನ್ನು ಅಲ್ಲಿಯೇ ಬಿಟ್ಟು ಓಡಿ ಹೋದನು.

ಇತ್ತ ನಾಲ್ವರು ಗೆಳೆಯರೂ ಒಟ್ಟಿಗೆ ಸೇರಿ ಆನಂದಾಶ್ರುವನ್ನು ಸುರಿಸಿದರು. ಒಬ್ಬರ ಸಹಾಯವನ್ನು ಮತ್ತೊಬ್ಬರು ಪ್ರಶಂಸಿಸಿದರು. ಜೀವ ಉಳಿದಿದ್ದಕ್ಕಾಗಿ ಸಂತೋಷಗೊಂಡರು. ಆನಂದದಿಂದ ಎಲ್ಲರೂ ಕುಣಿದಾಡಿದರು.

–ದುರ್ಗಸಿಂಹನ 'ಪಂಚತಂತ್ರ'

**ಕ್ಷೇತ್ರ :** ಬರೆಯುವುದು

**ಸಾಮರ್ಥ್ಯ:** ಆಲಿಸಿದ ಮತ್ತು ಓದಿದ ವಿಷಯಗಳನ್ನು ಸೂಕ್ತ ಲೇಖನ ಚಿಹ್ನೆಗಳನ್ನು ಬಳಸಿ ಅರ್ಥಪೂರ್ಣ ವಾಕ್ಯಗಳಲ್ಲಿ ಬರೆಯುವುದು.

**ಆಶಯ :**

ಬಾಳು ಸಂತೋಷವಾಗಿರಲು ಆಪ್ತರು, ಬಂಧುಗಳು, ಗೆಳೆಯರು ಬೇಕು. ಅದರಲ್ಲೂ ಗೆಳೆಯರು ಎಂಥ ಪರಿಸ್ಥಿತಿಯಲ್ಲೂ ಜೊತೆಗಿರುತ್ತಾರೆ. ಕಷ್ಟಸುಖಗಳಲ್ಲಿ ಭಾಗಿಗಳಾಗುತ್ತಾರೆ. ಜೀವದ ಹಂಗು ತೊರೆದು ಗೆಳೆಯರಿಗೆ ಸಹಾಯ ಮಾಡುತ್ತಾರೆ. ಇಂತಹ ಗೆಳೆಯರನ್ನು ಹೊಂದಿದವರೇ ಧನ್ಯರು. ಗೆಳೆತನ, ಅದರ ಮಹತ್ವ, ಪರಸ್ಪರರ ಪ್ರೀತಿ, ಹೊಂದಾಣಿಕೆ, ಸಹಾಯ ಹಸ್ತ ಇವುಗಳನ್ನು ಅರ್ಥಮಾಡಿಕೊಳ್ಳುವುದು ಬಲುಮುಖ್ಯ. ಒಳ್ಳೆಯ ಗೆಳೆಯರನ್ನು ಸಂಪಾದಿಸಿಕೊಳ್ಳಲು ಪ್ರೇರಣೆ ನೀಡುವುದು ಇಲ್ಲಿನ ಆಶಯವಾಗಿದೆ.

**ಕವಿ ಕೃತಿ ಪರಿಚಯ:**

**ಕವಿ : ದುರ್ಗಸಿಂಹನು** 'ಕನ್ನಡ ಪಂಚತಂತ್ರ' ಗ್ರಂಥವನ್ನು ರಚಿಸಿದ್ದಾನೆ. ಈತನ ಕಾಲ ಸುಮಾರು ೧೦೩೧. ಈತನು ಚಾಲುಕ್ಯ ದೊರೆ ಜಗದೇಕಮಲ್ಲನಲ್ಲಿ ದಂಡನಾಯಕ ಮತ್ತು ಸಂಧಿವಿಗ್ರಹಿಯಾಗಿದ್ದನು. ಈತನ ಜನ್ಮಸ್ಥಳ ಕರ್ಣಾಟಕದ ಸಯ್ಯಡಿಯ ಅಗ್ರಹಾರ ಎನ್ನಲಾಗಿದೆ. ಈತನ ತಂದೆ ಈಶ್ವರಾರ್ಯ, ತಾಯಿ ದೇವಕಬ್ಬೆ, ಗುರು ಮಹಾಯೋಗಿ ಶಂಕರಭಟ್ಟ.

ಕೃತಿ : ಪಂಚತಂತ್ರ ಕೃತಿಗೆ ವಸುಭಾಗ ಭಟ್ಟ ಎಂಬ ಕವಿಯು ಸಂಸ್ಕೃತದಲ್ಲಿ ರಚಿಸಿದ ಪಂಚತಂತ್ರವು ಆಕರವಾಗಿದೆ. ಇದೊಂದು ಕಥನ ಕಾವ್ಯ. ಇದರಲ್ಲಿ ತಂತ್ರಗಾರಿಕೆ ಮತ್ತು ಕಥೆಗಳು ಸೊಗಸಾಗಿ ಮೇಳೈಸಿವೆ. ನೀತಿ ನಿರೂಪಣೆಯು ಕೃತಿಯ ಮುಖ್ಯ ಆಶಯವಾಗಿದೆ.



**ಅರ್ಥ ತಿಳಿಯಿರಿ :**

ದಟ್ಟವಾದ–ಒತ್ತೊತ್ತಾದ, ಸಾಂದ್ರವಾದ. ಬಿಲ–ರಂಧ್ರ, ತೂಬು. ಮೂಷಿಕ–ಇಲಿ. ಆತ್ಮೀಯ– ಆಪ್ತ, ಹತ್ತಿರದ. ಅನ್ಯೋನ್ಯ– ಪರಸ್ಪರ. ದಡ–ತೀರ, ತಟ. ಬೆನ್ನಟ್ಟು–ಬೆನ್ನುಹತ್ತು, ಹಿಂಬಾಲಿಸು. ಭಯಗ್ರಸ್ತ–ಹೆದರಿಕೆಯಿಂದ ಕೂಡಿದ, ಅಂಜಿದ. ಬೇಡ–ಬೇಟೆಗಾರ, ಕಿರಾತ. ನಿಶ್ಚಿಂತೆ– ಚಿಂತೆಯಿಲ್ಲದೆ, ನಿರುಂಬಳ. ಸಂಚರಿಸು–ತಿರುಗಾಡು, ಸುಳಿದಾಡು. ಆಕಸ್ಮಿಕ–ಅನಿರೀಕ್ಷಿತ. ಒಡ್ಡು–ಚಾಚು, ಹಾಸು. ಸಿಕ್ಕಿಬೀಳು–ಸೆರೆಯಾಗು, ಬಂಧನವಾಗು. ಪಾಶ–ಬಲೆ, ಬಂಧನ. ಅಗಲು–ದೂರವಾಗು. ಸಿಲುಕು–ಸಿಕ್ಕಿಕೊಳ್ಳು, ಸೆರೆಯಾಗು. ಗತಿ–ಪಾಡು, ಅವಸ್ಥೆ. ಸೂಚಿಸು–ಹೇಳು, ತಿಳಿಸು. ದೃಶ್ಯ–ನೋಟ. ಆಗಮನ–ಬರುವುದು. ಉತ್ಪಾತ– ಆಕಸ್ಮಿಕ ಘಟನೆ, ಅಪಶಕುನ. ಪ್ರಶಂಸಿಸು–ಹೊಗಳು, ಕೊಂಡಾಡು.

## ವಿವರ ತಿಳಿಯಿರಿ :

ಮಡು : ನದಿ–ತೋಡು ಮುಂತಾದವುಗಳ ಆಳವಾದ ನೀರಿರುವ ಪ್ರದೇಶ

ಸಾರಂಗ : ಕೊಂಬಿರುವ ಜಿಂಕೆ.

ಬಂಧಮುಕ್ತಗೊಳಿಸು : ಬಂಧನದಿಂದ ಬಿಡುಗಡೆಗೊಳಿಸು, ಪಾರುಮಾಡು.

ಸಂಕುಚಿತಗೊಳ್ಳು : ಮುದುಡಿಕೊಳ್ಳು, ಕುಗ್ಗಿಕೊಳ್ಳು.

ಮೋಹಿತನಾಗು : ಆಕರ್ಷಣೆಗೆ ಒಳಗಾಗು, ಮರುಳಾಗು.

ಆನಂದಾಶ್ರು : ಹೆಚ್ಚು ಸಂತೋಷವಾದಾಗ ಬರುವ ಕಣ್ಣೀರು.

# ವ್ಯಾಕರಣ ಮಾಹಿತಿ

## ಕೆಳಗಿನ ವಾಕ್ಯಗಳನ್ನು ಗಮನಿಸಿರಿ :

೧. ಒಂದಾನೊಂದು ಕಾಲದಲ್ಲಿ ಒಂದು ದಟ್ಟವಾದ ಅರಣ್ಯವಿತ್ತು.

೨. ಲಘುಪತನಕ ಮರದ ಮೇಲಕ್ಕೆ ಹಾರಿತು.

ಇಲ್ಲಿ ವಾಕ್ಯದ ಕೊನೆಯಲ್ಲಿ ಪೂರ್ಣವಿರಾಮ ಚಿಹ್ನೆ (.) ಬಳಕೆಯಾಗಿದೆ. ಇದನ್ನು 'ಬಿಂದು' ಎಂದೂ ಕರೆಯುತ್ತಾರೆ. ಇದು ವಾಕ್ಯದ ಪೂರ್ಣಾರ್ಥ ಕ್ರಿಯೆಯನ್ನು ಸೂಚಿಸುತ್ತದೆ. ಇದು ವಾಕ್ಯದ ಕೊನೆಯಲ್ಲಿ ಬಳಕೆಯಾಗುತ್ತದೆ.

೩. ತಾಯಿಗಿಂತ ಬಂಧುವಿಲ್ಲ; ಉಪ್ಪಿಗಿಂತ ರುಚಿಯಿಲ್ಲ.

೪. ಅಷ್ಟು ಸಾಕು; ಮುಂದಿನದು ನನಗೆ ಬಿಡು.

ಇಲ್ಲಿ ವಾಕ್ಯದ ನಡುವೆ 'ಅರ್ಧವಿರಾಮ ಚಿಹ್ನೆ' (;) ಬಳಕೆಯಾಗಿದೆ. ಇದು ಪ್ರಧಾನ ವಾಕ್ಯಗಳಲ್ಲಿನ ಉಪವಾಕ್ಯಗಳ ಅಂತ್ಯದಲ್ಲಿ ಬಳಕೆಯಾಗುತ್ತದೆ.

೫. ಮಂಥರಕ, ಹಿರಣ್ಯರೋಮ, ಲಘುಪತನಕ ಮತ್ತು ಚಿತ್ರಾಂಗ ನಾಲ್ವರು ಗೆಳೆಯರು.

೬. ಬೇಡನು ಕೂಡಲೆ ಮಂಥರಕನನ್ನೂ, ಬಲೆಯನ್ನೂ ನೆಲಕ್ಕಿಳಿಸಿ ಹೊರಟನು.

ಇಲ್ಲಿ ವಾಕ್ಯದ ನಡುನಡುವೆ ಅಲ್ಪವಿರಾಮ ಚಿಹ್ನೆ (,) ಬಳಕೆಯಾಗಿದೆ. ಇದು ಸಂಬೋಧನೆಯ ಮುಂದೆ, ಕರ್ತೃ, ಕರ್ಮ, ಕ್ರಿಯಾಪದಗಳಿಗೆ ವಿಶೇಷಣಗಳು ಬಂದಾಗ ಬಳಕೆಯಾಗುತ್ತದೆ. ಹಾಗೂ ಕೊನೆಯ ಪದವನ್ನು ಬಿಟ್ಟು ಉಳಿದ ಪದಗಳ ಮುಂದೆ ಅಗತ್ಯಕ್ಕೆ ಹೊಂದಿಕೊಂಡು ಬಳಕೆಯಾಗುತ್ತದೆ.

೭. ನೀನು ಏಕೆ ಓಡೋಡಿ ಬಂದೆ?

೮. ಯಾರಿವರು? ಎಲ್ಲಿಂದ  ಬಂದರು?

ಇಲ್ಲಿ ವಾಕ್ಯದ ಕೊನೆಯಲ್ಲಿ 'ಪ್ರಶ್ನಾರ್ಥಕ ಚಿಹ್ನೆ' (?) ಬಳಕೆಯಾಗಿದೆ. ಇದು ಪ್ರಶ್ನೆ ಕೇಳುವ ಸಂದರ್ಭದಲ್ಲಿ ಪದ ಅಥವಾ ವಾಕ್ಯದ ಅಂತ್ಯದಲ್ಲಿ ಬಳಕೆಯಾಗುತ್ತದೆ.

೯. ಅಬ್ಬಾ! ಎಂಥ ಸೊಗಸಾದ ಹಾಡು!

೧೦. ಆಹಾ! ಎಂಥ ಸುಂದರ ದೃಶ್ಯ!

ಇಲ್ಲಿರುವ ವಾಕ್ಯದಲ್ಲಿ 'ಭಾವಸೂಚಕ ಚಿಹ್ನೆ' (!) ಬಳಕೆಯಾಗಿದೆ. ಇದನ್ನು 'ಆಶ್ಚರ್ಯಸೂಚಕ ಚಿಹ್ನೆ' ಎಂದೂ ಹೇಳುತ್ತಾರೆ. ಇದು ಭಾವನೆಗಳನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಬಳಕೆಯಾಗುತ್ತದೆ.

ಸಂದರ್ಭಕ್ಕೆ ತಕ್ಕಂತೆ ಬರವಣಿಗೆಯಲ್ಲಿ ಲೇಖನ ಚಿಹ್ನೆಗಳನ್ನು ಬಳಸಬೇಕು. ಇದರಿಂದ ಸ್ಪಷ್ಟವಾಗಿ ಓದಲು, ಅರ್ಥ ತಿಳಿಯಲು ಸಾಧ್ಯವಾಗುತ್ತದೆ. ಇನ್ನೂ ಕೆಲವು ಲೇಖನ ಚಿಹ್ನೆಗಳಿವೆ. ಅವುಗಳ ವಿವರಣೆಯನ್ನು ಮುಂದೆ ತಿಳಿಯೋಣ.

## ಅಭ್ಯಾಸಗಳು

**ಅ. ಪ್ರತಿ ಪ್ರಶ್ನೆಗೆ ಮೂರು ಆಯ್ಕೆಗಳನ್ನು ಕೊಟ್ಟಿದೆ. ಸರಿಯಾದ ಉತ್ತರವನ್ನು ಆಯ್ಕೆ ಮಾಡಿ ಬರೆಯಿರಿ.**

೧. ಕಾಗೆಯು ______________ ಕಟ್ಟಿಕೊಂಡಿತ್ತು. (ಮನೆ, ಗೂಡು, ಗುಡಿಸಲು)

೨. ನಾಲ್ವರು ಗೆಳೆಯರು ಸುಖವಾಗಿ ___________ ನಡೆಸುತ್ತಿದ್ದರು. (ಜೀವನ, ಆಟ, ಚಳುವಳಿ)

೩. ಮುದುರಿಕೊಂಡಿದ್ದ _________ ಬೇಡನ ಕಣ್ಣಿಗೆ ಬಿದ್ದಿತು. (ಇಲಿ, ಆಮೆ, ಜಿಂಕೆ)

೪. ಒಬ್ಬರ ಸಹಾಯವನ್ನು _________ ಪ್ರಶಂಸಿಸಿದರು. (ಎಲ್ಲರೂ, ಇನ್ನೊಬ್ಬರು, ಮತ್ತೊಬ್ಬರು)

**ಆ. ಕೆಳಗಿನ ವಾಕ್ಯಗಳಲ್ಲಿ ಸರಿ, ತಪ್ಪು ಗುರುತಿಸಿರಿ.**

೧. ಚಿತ್ರಾಂಗ ಎಂಬ ಆಮೆಯು ಓಡುತ್ತ ಬಂದಿತು.

೨. ಬೇಡನನ್ನು  ಕಂಡು ಎಲ್ಲರಿಗೂ ಬಲು ಸಂತೋಷವಾಯಿತು.

೩. ಸತ್ತುಬಿದ್ದ ಸಾರಂಗವನ್ನು ನೋಡಿ ಬೇಡನು ಮೋಹಿತನಾದನು.

೪. ನಮ್ಮ ಮನಸ್ಸಾಕ್ಷಿ ಮನುಷ್ಯರ ಅಂತರಂಗವಾಣಿ.

**ಇ. ಈ ಮಾತನ್ನು ಹೇಳಿದವರ ಹೆಸರು ಬರೆಯಿರಿ.**

೧. "ಏನಯ್ಯಾ! ಏಕಿಷ್ಟು ಗಾಬರಿಯಾಗಿರುವೆ?"

೨. "ಇಲ್ಲಿ ಭಯವಿಲ್ಲ ನಿಶ್ಚಿಂತೆಯಿಂದ ನೀರು ಕುಡಿ"

೩. "ಮಂಥರಕನಿಗಾದ ಗತಿ ನನಗಾಗಲಿ"

೪. "ಬೇಗನೆ ಮಡುವನ್ನು ಸೇರಿಕೋ"

## ಈ. ಪದಗಳನ್ನು ಬಳಸಿ ಸ್ವಂತವಾಕ್ಯ ರಚಿಸಿರಿ.

೧. ಕಷ್ಟಸುಖ  ೨. ಸಂಚರಿಸು  ೩. ಆನಂದಾಶ್ರು  ೪. ದೃಶ್ಯ

## ಉ. ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಮೂಷಿಕವು ಎಲ್ಲಿ ಮನೆಮಾಡಿಕೊಂಡಿತ್ತು?

೨. ಕಾಗೆಯು ಸಾರಂಗವನ್ನು ಏನೆಂದು ಕೇಳಿತು?

೩. ಹಿರಣ್ಯರೋಮನು ಚಿತ್ರಾಂಗನನ್ನು ಹೇಗೆ ಬಂಧಮುಕ್ತಗೊಳಿಸಿದನು?

೪. ಮಂಥರಕವು ಯಾರ ಕೈಗೆ ಸಿಕ್ಕಿಹಾಕಿಕೊಂಡಿತು?

೫. ಚಿತ್ರಾಂಗನು ಏಕೆ ಮರುಗಿದನು?

## ಊ. ಸಂದರ್ಭ ಸಹಿತ ವಿವರಿಸಿರಿ.

೧. "ಓಡಿಓಡಿ ಬಳಲಿದ್ದೇನೆ"

೨. "ಬೇಗನೆ ಮಡುವನ್ನು ಸೇರಿಕೋ"

## ಋ. ಕೆಳಗಿನ ವಾಕ್ಯಗಳನ್ನು ಸೂಕ್ತ ಲೇಖನಚಿಹ್ನೆ ಬಳಸಿ ಬರೆಯಿರಿ.

೧. ಸ್ವಾಮಿ ತಕ್ಕೊಳ್ಳಿ ನಿಮ್ಮ ಚಿನ್ನದ ನಾಣ್ಯ ಎಂದು ಕೈ ಚಾಚಿದನು.

೨. ಮಂಥರಕ ಹಿರಣ್ಯರೋಮ ಲಘುಪತನಕ ಮತ್ತು ಚಿತ್ರಾಂಗ ಗೆಳೆಯರು

೩. ಏಳಿಎದ್ದೇಳಿ ಗುರಿಮುಟ್ಟುವ ತನಕ ನಿಲ್ಲದಿರಿ ಎಂದು ಸ್ವಾಮಿ ವಿವೇಕಾನಂದರು ಕರೆ ನೀಡಿದರು

## ಎ. ಕೊಟ್ಟಿರುವ ಲೇಖನ ಚಿಹ್ನೆಗಳನ್ನು ಬಳಕೆಯಾಗುವಂತೆ ಎರಡೆರಡು ವಾಕ್ಯಗಳನ್ನು ರಚಿಸಿರಿ.

ಪೂರ್ಣವಿರಾಮ ಚಿಹ್ನೆ:

ಅಲ್ಪವಿರಾಮ ಚಿಹ್ನೆ:



## ಭಾಷಾಆಟ

### ದಾಳದಾಟ

- ಒಂದು ದಾಳ ತಯಾರಿಸಿಕೊಂಡು ಅದರ ಒಂದೊಂದು ಬದಿಗೆ ಒಂದೊಂದು ಲೇಖನಚಿಹ್ನೆಯನ್ನು ಬರೆಯಿರಿ.
- ಸ್ಪರ್ಧಾಳುಗಳು ಎದುರು–ಬದುರು ಕುಳಿತುಕೊಳ್ಳಲಿ.
- ಮೊದಲಿನ ಗುಂಪಿನ ಒಬ್ಬರು ದಾಳವನ್ನು ಮೇಲಕ್ಕೆ ಚಿಮ್ಮಿರಿ. ಅದು ಕೆಳಕ್ಕೆ ಬಿದ್ದಾಗ ಮೇಲ್ಭಾಗದಲ್ಲಿ ಇರುವ ಲೇಖನ ಚಿಹ್ನೆಗೆ ಸಂಬಂಧಿಸಿದಂತೆ ಎದುರಿನವರು ಒಂದು ವಾಕ್ಯವನ್ನು ಹೇಳಬೇಕು. ಸರಿಯಾಗಿ ಹೇಳಿದರೆ ೧೦ ಅಂಕಗಳು.

➢ ಅನಂತರ ಎರಡನೆಯ ತಂಡದವರು ದಾಳ ಹಾಕಬೇಕು. ಮೊದಲನೆಯ ತಂಡದವರು ವಾಕ್ಯ ಹೇಳಬೇಕು. ಸರಿಯಾಗಿ ಹೇಳಿದರೆ ೧೦ ಅಂಕಗಳು.

➢ ಹೀಗೆಯೇ ಆಡುತ್ತ ಆಟ ಮುಂದುವರೆಸಬೇಕು. ಹತ್ತು ಹತ್ತುಬಾರಿ ದಾಳ ಹಾಕಿದ ಅನಂತರ ಯಾವ ತಂಡದವರು ಹೆಚ್ಚು ಅಂಕ ಗಳಿಸಿರುತ್ತಾರೋ ಅವರು ವಿಜಯಶಾಲಿಗಳು.

## ಯೋಜನೆ

➢ ವಿವಿಧ ಲೇಖನಚಿಹ್ನೆಗಳು ಬಳಕೆಯಾಗಿರುವ ವಾಕ್ಯ ಇಲ್ಲವೇ ಗದ್ಯಭಾಗ/ ಚುಟುಕುಗಳನ್ನು ಸಂಗ್ರಹಿಸಿ ಪುಸ್ತಕ ತಯಾರಿಸಿರಿ.

➢ ಲೇಖನ ಚಿಹ್ನೆಗಳನ್ನು ಮಾತ್ರ ಬಳಸಿಕೊಂಡು ರಂಗೋಲಿ ಚಿತ್ರ ಬಿಡಿಸಿರಿ.

## ಓದಿಗೆ ಮನ್ನಣೆ :

೧. ಪಂಚತಂತ್ರದ ಇತರ ಕಥೆಗಳನ್ನು ಓದಿರಿ.

೨. ಮಕ್ಕಳ ನಿಯತಕಾಲಿಕೆಗಳಲ್ಲಿ ಬರುವ ಕಥೆಗಳನ್ನು ಓದಿರಿ.

೩. ಸಂಭಾಷಣೆಗಳಲ್ಲಿ ಬಳಕೆಯಾಗುವ ಲೇಖನ ಚಿಹ್ನೆಗಳನ್ನು ಗಮನಿಸಿರಿ.

## ಶುಭ ನುಡಿ :

೧. ಒಳ್ಳೆಯ ಗೆಳೆಯರು ಎರಡನೆಯ ಜೀವ ಇದ್ದಹಾಗೆ.

೨. ಗುಣ ನೋಡಿ ಗೆಳೆತನ ಮಾಡು.

೩. ಒಳ್ಳೆಯ ಗೆಳೆಯರನ್ನು ಸಂಪಾದಿಸು. ನಿನ್ನ ಜೀವನ ಸದಾ ಹಸಿರಾಗಿರುತ್ತದೆ.



## ಪೂರಕ ಪಾಠ –

# ನಾನಿಲ್ಲಿದ್ದೇನೆ

ಅಂಕಿತಾ ಮತ್ತು ರಚನಾ ಸಹಪಾಠಿಗಳು. ಆಟಪಾಠ, ಊಟ–ಉಪಚಾರಗಳಲ್ಲಿ ಜೊತೆಯಾಗಿಯೇ ಇರುತ್ತಿದ್ದರು. ಅದೊಂದು ದಿನ ಮಧ್ಯಾಹ್ನ ಊಟ ಮುಗಿದ ಅನಂತರ ಸೂಚನಾ ಫಲಕವನ್ನು ಗಮನಿಸಿದರು. ಅಲ್ಲಿ ಹೊಸ ಸೂಚನೆಯೊಂದು ಅವರ ಕಣ್ಣಿಗೆ ಬಿದ್ದಿತು. ಮಕ್ಕಳ ದಿನಾಚರಣೆಯನ್ನು ಆಚರಿಸುವ ವಿಷಯ. ಚಾಚಾ ನೆಹರು ಕುರಿತು ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಭಾಗವಹಿಸುವವರು ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಲು ಸೂಚಿಸಲಾಗಿತ್ತು.

ಗೆಳತಿಯರಿಬ್ಬರೂ ಪ್ರಬಂಧ ಬರೆಯಲು ತೀರ್ಮಾನಿಸಿದರು. ಕೂಡಲೇ ಗುರುಗಳ ಹತ್ತಿರ ಹೋಗಿ ತಮ್ಮ ಹೆಸರನ್ನು ಕೊಟ್ಟರು. "ನೆಹರೂರವರ ಕುರಿತಾದ ಪುಸ್ತಕ ಬೇಕಿತ್ತು ಗುರುಗಳೆ" ಎಂದು ರಾಗ ಎಳೆದಳು ಅಂಕಿತಾ. "ಅದಕ್ಕೇನಂತೆ. ಶಾಲಾ ಗ್ರಂಥಾಲಯದಿಂದ ತೆಗೆದುಕೊಳ್ಳಿ" ಎಂದರು ಗುರುಗಳು.

ಇಬ್ಬರೂ ಗ್ರಂಥಾಲಯದ ಕೊಠಡಿಗೆ ಹೋದರು. ಕಪಾಟುಗಳಲ್ಲಿ ರಾಶಿ ರಾಶಿ ಪುಸ್ತಕಗಳಿದ್ದವು. ಇಬ್ಬರೂ ಹುಡುಕಲು ಪ್ರಾರಂಭಿಸಿದರು. ಎಷ್ಟು ತಡಕಾಡಿದರೂ ಅವರಿಗೆ ಬೇಕಾದ ಪುಸ್ತಕ ದೊರೆಯಲಿಲ್ಲ. ತರಗತಿ ಪ್ರಾರಂಭದ ಸಮಯವಾಯಿತು. ಮುಖ ಸಪ್ಪಗೆ ಮಾಡಿಕೊಂಡು ಗುರುಗಳ ಬಳಿಗೆ ಹೋದರು. “ಸರ್ ಆ ರಾಶಿಯಲ್ಲಿ ಎಷ್ಟು ಹುಡುಕಿದರೂ ಪುಸ್ತಕ ಸಿಗಲಿಲ್ಲ” ಎಂದು ಹೇಳಿದಳು ರಚನಾ. ಗುರುಗಳು ಸ್ವಲ್ಪಹೊತ್ತು ಯೋಚಿಸಿ “ನಿಮ್ಮ ತರಗತಿಯವರೆಲ್ಲರೂ ನಾಳೆ ಬೆಳಗ್ಗೆ ೯-೦೦ ಗಂಟೆಗೆ ಬನ್ನಿರಿ” ಎಂದು ಹೇಳಿದರು.





ಮಾರನೆಯ ದಿನ ಸರಿಯಾದ ಸಮಯಕ್ಕೆ ವಿದ್ಯಾರ್ಥಿಗಳೆಲ್ಲ ಬಂದರು. ಗುರುಗಳು ಮಾತು ಆರಂಭಿಸಿದರು. “ಮಕ್ಕಳೆ, ಶಾಲಾ ಗ್ರಂಥಾಲಯದಲ್ಲಿ ಪುಸ್ತಕಗಳು ಕ್ರಮವಾಗಿಲ್ಲ. ಗ್ರಂಥಾಲಯವನ್ನು ಬೇರೆ ಕೊಠಡಿಗೆ ವರ್ಗಾಯಿಸುವಾಗ ಮಿಶ್ರವಾಗಿಬಿಟ್ಟಿವೆ. ಇದರಿಂದ ನಮಗೆ ಬೇಕಾದ ಪುಸ್ತಕ ಕೈಗೆ ಸಿಗುತ್ತಿಲ್ಲ. ನಿನ್ನೆ ಈ ಅನುಭವ ಅಂಕಿತಾ ಮತ್ತು ರಚನಾರಿಗೂ ಆಗಿದೆ. ಹಾಗಾಗಿ ಗ್ರಂಥಾಲಯದ ಪುಸ್ತಕಗಳನ್ನು ಕ್ರಮವಾಗಿ, ವ್ಯವಸ್ಥಿತವಾಗಿ ಜೋಡಿಸಬೇಕಾಗಿದೆ. ಇದಕ್ಕಾಗಿ ನಿಮ್ಮ ಸಹಕಾರ ಬೇಕಾಗಿದೆ. ಇಂದು ಈ ಕೆಲಸ ಮಾಡೋಣವೇ?” ಎಂದರು. ವಿದ್ಯಾರ್ಥಿಗಳೆಲ್ಲರು “ಹಾಗೆಯೇ ಆಗಲಿ ಸರ್” ಎಂದರು.

ಗುರುಗಳು, ವಿದ್ಯಾರ್ಥಿಗಳು ಗ್ರಂಥಾಲಯದ ಕೊಠಡಿಗೆ ಹೋಗಿ ಕೆಲಸ ಪ್ರಾರಂಭಿಸಿದರು. ಕಥೆ, ಕಾದಂಬರಿ, ಪ್ರಹಸನ, ಆತ್ಮಚರಿತ್ರೆ, ಪ್ರವಾಸಕಥನ, ನಾಟಕ, ಪ್ರಬಂಧ, ಕಾವ್ಯ ಹೀಗೆ ಪುಸ್ತಕಗಳನ್ನು ವಿವಿಧ ಭಾಗಗಳಾಗಿ ವಿಂಗಡಿಸಲು ತೀರ್ಮಾನಿಸಲಾಯಿತು. ಒಂದೊಂದು ಗುಂಪಿನಲ್ಲಿ ನಾಲ್ಕು-ನಾಲ್ಕು ಜನರಿದ್ದರು. ಗುರುಗಳು ಪುಸ್ತಕದ ರಾಶಿಯನ್ನು ಕಪಾಟಿನಿಂದ ಎಳೆದೆಳೆದು ಕೆಳಗೆ ಹಾಕಿಸಿದರು.

ಗುರುಗಳು ನೆಲದಲ್ಲಿ ಕುಳಿತು ನಿಧಾನವಾಗಿ ಒಂದೊಂದೇ ಪುಸ್ತಕವನ್ನು ಎತ್ತಿಕೊಳ್ಳತೊಡಗಿದರು. ಆ ಪುಸ್ತಕವು ಯಾವ ವಿಭಾಗಕ್ಕೆ ಸೇರಬೇಕು ಎಂದು ನಿರ್ಧರಿಸಿದರು. ಕತೆ, ಕಾದಂಬರಿ, ಕವನ, ನಾಟಕ...... ಗುರುಗಳು ಕೊಡುತ್ತಿದ್ದ ಪುಸ್ತಕವನ್ನು ಶಿಕ್ಷಕಿ ಆಯಾ ಗುಂಪಿಗೆ ರವಾನಿಸಿದರು.

ಪ್ರತಿ ಗುಂಪುಗಳಲ್ಲಿ ಒಬ್ಬರು ಪುಸ್ತಕದ ಕ್ರಮಸಂಖ್ಯೆ, ಹೆಸರು, ಲೇಖಕರ ಹೆಸರು, ಬೆಲೆ ಇತ್ಯಾದಿ ವಿಷಯಗಳನ್ನು ವಹಿಯಲ್ಲಿ ಬರೆಯುತ್ತಿದ್ದರು. ಇನ್ನೊಬ್ಬರು ಪುಸ್ತಕದ ಮೇಲೆ ಕ್ರಮಸಂಖ್ಯೆಯನ್ನು ದೊಡ್ಡದಾಗಿ ಎರಡು ಬದಿಗೂ ಬರೆಯತೊಡಗಿದರು. ಮತ್ತೊಬ್ಬರು ಪುಸ್ತಕಗಳನ್ನು ಕಪಾಟಿನಲ್ಲಿ ಆಯಾ ವಿಭಾಗದಲ್ಲಿ ಜೋಡಿಸಿದರು. ನಾಲ್ಕೈದು ಗಂಟೆಗಳ ನಿರಂತರ ಕೆಲಸದಿಂದ ಗ್ರಂಥಾಲಯ ಹೊಸರೂಪ ಪಡೆಯಿತು. ಈಗ ಪುಸ್ತಕಗಳನ್ನು ಹುಡುಕಿ ಹುಡುಕಿ ಸುಸ್ತಾಗುವ ಪ್ರಮೇಯವೇ ಇಲ್ಲ. ಪ್ರತಿಯೊಂದು ಪುಸ್ತಕವೂ ಓದುಗರನ್ನು 'ನಾನಿಲ್ಲಿದ್ದೇನೆ' 'ನಾನಿಲ್ಲಿದ್ದೇನೆ' ಎಂದು ಕೂಗಿ ಕರೆಯುತ್ತಿತ್ತು.



## I. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ :

೧ ಪುಸ್ತಕ ಯಾವ ಗುಂಪಿಗೆ ಸೇರಬೇಕೆಂದು ಯಾರು ನಿರ್ಧರಿಸಿದರು?

೨ ಸೂಚನೆಗಳನ್ನು ಎಲ್ಲಿ ಪ್ರದರ್ಶಿಸಲಾಗಿತ್ತು?

೩ ಶಾಲೆಯಲ್ಲಿ ಯಾವ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು?

೪ ಪ್ರತಿ ಪುಸ್ತಕವು ಏನೆಂದು ಕೂಗಿ ಕರೆಯುತ್ತಿತ್ತು?

೫ ಅಂಕಿತಾ ಮತ್ತು ರಚನಾ ಗ್ರಂಥಾಲಯಕ್ಕೆ ಏಕೆ ಹೋಗಿದ್ದರು?

# ಹೃದಯ ವಚನಗಳು

ಒಂಬತ್ತು ತಡವೆ ಉಪಕರಿಸಿ ಒಮ್ಮೆ ತಪ್ಪಲು, ಮೊದಲಿನೆಲ್ಲವ ಮರೆವರಯ್ಯ
ಹತ್ತು ಬಾರಿ ಮೆಚ್ಚಿ ಮತ್ತೊಂದು ಬಾರಿ ಟೀಕಿಸಲು, ಕೆರಳಿ ಜರೆವರಯ್ಯ
ಸ್ತುತಿಗೆ ತಲೆಯೊಲೆಯಿಸಿ ನಲಿದೊಲಿವುದಯ್ಯ ಲೋಕ
ಓಲೈಕೆಯ ಚಾಳಿಯ ದೂರೀಕರಿಸಯ್ಯ ಸ್ತೋತ್ರಾತೀತ ಹೃದಯೇಶ ಸೋಮೇಶಾ॥




ನೆಗೆವ ಹಲ್ಲೆಯಾಗುವುದೊಮ್ಮೆ ಮೊರೆವ ಹುಲಿಯಾಗುವುದೊಮ್ಮೆ
ಕೆನೆದು ಕುಪ್ಪಳಿಸುವ ಕುದುರೆಯಾಗುವುದೊಮ್ಮೆ
ಗಂಭೀರಗತಿಯ ಗಜವಾಗುವುದೊಮ್ಮೆ
ಗುಟುರುವ ಗೂಳಿಯಾಗುವುದೊಮ್ಮೆ ಚಪಲತೆಯ ಕೋತಿಯಾಗುವುದೊಮ್ಮೆ
ನಂಜಿನ ನಾಗವಾಗುವುದೊಮ್ಮೆ ನೀರೊಳಗೆ ನಿರಾಳವಿಹ ಮೀನಾಗುವುದೊಮ್ಮೆ
ಹೃದಯಕೆನಿತು ರೂಪಗಳೊ ಈ ಹದನವ ನೀನೆ ಬಲ್ಲೆ
ಬಹುರೂಪಿ ಹೃದಯೇಶ ಸೋಮೇಶಾ॥

ಎನಿತು ಭಾಷೆಗಳ ಕಲಿತಡೇನು ಹೃದಯದ ಭಾಷೆ ಕಲಿಯದನ್ನಕ?
ಎನಿತು ನುಡಿ ಸಡಗರ ತೋರ್ದಡೇನು ಎದೆಯ ಮಿಡಿತವರಿಯದನ್ನಕ?
ಎನಿತು ಶೋಧನೆಗೈದಡೇನು ಹೃದಯ ಶೋಧನೆಗೈಯದನ್ನಕ?
ಎನಿತು ಸಾಧನೆಗೈದಡೇನು ಹೃದಯದ ಬೆಸುಗೆ ಸಾಧಿತವಾಗದನ್ನಕ?
ಇವೆಲ್ಲಕ್ಕೂ ಜೀವಭಾವದಾತ ನೀನೆ ಕಾಣ ಹೃದಯೇಶ ಸೋಮೇಶಾ॥

–ಅಮೃತ ಸೋಮೇಶ್ವರ.

**ಕ್ಷೇತ್ರ** ; ಓದುವುದು

**ಸಾಮರ್ಥ್ಯ:** ಓದಿದ ವಿಷಯಗಳ ಬಗ್ಗೆ ಆಲೋಚಿಸಿ ತಾರ್ಕಿಕವಾಗಿ ತೀರ್ಮಾನಿಸುವುದು.

**ಆಶಯ :**

ಹೃದಯವನ್ನು ಯಾವ ರೀತಿಯಲ್ಲಿ ತರ್ಕಕ್ಕೆ ಒಡ್ಡಿದರೂ ಪೂರ್ತಿಯಾಗಿ ಅರ್ಥೈಸಿಕೊಳ್ಳುವುದು ಕಷ್ಟ. ಒಬ್ಬೊಬ್ಬರು ಒಂದೊಂದು ಬಗೆಯಾಗಿ ಅದನ್ನು ಅರ್ಥೈಸಿಕೊಳ್ಳಲು ಪ್ರಯತ್ನಪಟ್ಟಿದ್ದಾರೆ. ಹೃದಯವಂತಿಕೆ ಕೇವಲ ಮಾನವರಲ್ಲಿಯೇ ಅಲ್ಲ, ಪ್ರಾಣಿಗಳಲ್ಲಿ ಕೂಡ ಇರುತ್ತವೆ. ಹೃದಯವನ್ನು ಅರ್ಥೈಸಿಕೊಳ್ಳುವ ಪುಟ್ಟ ಪ್ರಯತ್ನವೊಂದು ಈ ಆಧುನಿಕ ವಚನಗಳಲ್ಲಿವೆ.



**ಕವಿ ಪರಿಚಯ :**



**ಡಾ. ಅಮೃತ ಸೋಮೇಶ್ವರ** ಅವರು ದಕ್ಷಿಣ ಕನ್ನಡ ಜಿಲ್ಲೆಯ ಅಡ್ಕದಲ್ಲಿ ೨೭-೦೯-೧೯೩೫ರಲ್ಲಿ ಜನಿಸಿದರು. ಕನ್ನಡ ಮತ್ತು ತುಳು ಭಾಷೆಯ ಬಗೆಗೆ ಆಳವಾದ ಅಧ್ಯಯನ ಮಾಡಿ ಅರವತ್ತಕ್ಕೂ ಮಿಕ್ಕಿ ಕೃತಿಗಳನ್ನು ರಚಿಸಿದ್ದಾರೆ. ಸಣ್ಣಕಥೆ, ಕಾದಂಬರಿ, ವಿಮರ್ಶೆ, ನಾಟಕಗಳು ಇವರ ಆಡುಂಬೊಲ, ಉಪ್ಪುಗಾಳಿ, ಹೃದಯ ವಚನಗಳು, ತಂಬಿಲ, ರಂಗಿತ ಇತ್ಯಾದಿ ಕವನ ಸಂಕಲನಗಳನ್ನು ರಚಿಸಿದ್ದಾರೆ. ಪ್ರಸಿದ್ಧ ಜಾನಪದ ವಿದ್ವಾಂಸರಾದ ಶ್ರೀಯುತರು ಫಿನ್‌ಲ್ಯಾಂಡ್ ಮಹಾಕಾವ್ಯ ಕಲೆವಾಲವನ್ನು ತುಳುವಿಗೆ ಅನುವಾದಿಸಿದ್ದಾರೆ. ಎಲೆಗಳು, ರುದ್ರಶಿಲೆ ಸಾಕ್ಷಿ, ವನಮಾಲೆ, ಭಗವತಿ ಆರಾಧನೆ, ಮೋಯ ಮಲಯಾಳಿ ನಿಘಂಟು ಮುಂತಾದವು ಅವರ ಮಹತ್ತರ ಕೃತಿಗಳು. ಪುತ್ತೂರು ವಿವೇಕಾನಂದ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ತುಳು ಸಾಹಿತ್ಯ ಅಕಾಡೆಮಿಗಳ ಗೌರವ ಪ್ರಶಸ್ತಿಗಳಿಗೆ ಭಾಜನರಾದ ಶ್ರೀಯುತರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಲಭಿಸಿದೆ. ಪ್ರಸ್ತುತ ವಚನವನ್ನು ಅಮೃತಸೋಮೇಶ್ವರ ಅವರ 'ಹೃದಯ ವಚನಗಳು' ಎಂಬ ಸಂಕಲನದಿಂದ ಆರಿಸಲಾಗಿದೆ.

**ಅರ್ಥ ತಿಳಿಯಿರಿ:–**

ತಡವೆ–ಬಾರಿ, ಸಲ. ಉಪಕರಿಸು–ಉಪಕಾರ ಮಾಡು, ನೆರವು ನೀಡು. ಜರೆ– ನಿಂದಿಸು, ಬಯ್ಯು. ಸ್ತುತಿ–ಹೊಗಳಿಕೆ. ಒಲ್ಲೈಸು–ಮೆಚ್ಚಿಸು. ಚಾಳಿ–ನಡವಳಿಕೆ, ವರ್ತನೆ. ಹುಲ್ಲೆ–ಜಿಂಕೆ, ಚಿಗರೆ. ಮೊರೆವ–ಗರ್ಜಿಸುವ, ಕುಪ್ಪಳಿಸು–ಹಾರು, ಜಿಗಿಯು. ಗಜ–ಆನೆ. ಗುಟುರು–ಹೂಂಕರಿಸು, ಜೋರಾಗಿ ಧ್ವನಿ ಮಾಡು. ನಂಜು–ವಿಷ. ನಿರಾಳ–ಶಾಂತಿ, ನೆಮ್ಮದಿ. ಹದನ–ರೀತಿ. ಎನಿತು–ಎಷ್ಟು. ಮಿಡಿತ–ಬಡಿತ, ಸ್ಪಂದನ. ಬೆಸುಗೆ–ಹೊಂದಿಕೆ, ಜೋಡಣೆ. ಸಾಧಿತ–ಸಾಧಿಸಿದ, ಸಿದ್ಧಿಯನ್ನು ಪಡೆದ. ದಾತ–ಒಡೆಯ, ಸ್ವಾಮಿ.

**ವಿವರ ತಿಳಿಯಿರಿ:–**

- ಸ್ತೋತ್ರಾತೀತ :– ಹೊಗಳಿಕೆಗೆ ನಿಲುಕದ ಇಂದ್ರಿಯಗಳ ಹಿಡಿತಕ್ಕೆ ಸಿಗದ.
- ಬಹುರೂಪಿ :– ಹಲವು ರೂಪಗಳಿಂದ ಕೂಡಿ ಕಾಣಿಸಿಕೊಳ್ಳುವಾತ.
- ವಚನ :– ಹನ್ನೆರಡನೆಯ ಶತಮಾನದ ಶಿವಶರಣರು ರಚಿಸಿದ ಸಾಹಿತ್ಯ ಪ್ರಕಾರ; ಆಧುನಿಕ ಸಂದರ್ಭದಲ್ಲೂ ಅಂತಹ ವಚನಗಳು ರಚನೆಯಾಗುತ್ತಿವೆ.

## ವ್ಯಾಕರಣ ಮಾಹಿತಿ



ನಾವು ಹಿಂದಿನ ಪಾಠದಲ್ಲಿ ಕೆಲವು ಲೇಖನ ಚಿಹ್ನೆಗಳನ್ನು ಪರಿಚಯಮಾಡಿಕೊಂಡಿದ್ದೇವೆ. ಈಗ ಇನ್ನೂ ಕೆಲವು ಲೇಖನ ಚಿಹ್ನೆಗಳನ್ನು ತಿಳಿಯೋಣ.

**ಕೆಳಗಿನ ವಾಕ್ಯಗಳನ್ನು ಗಮನಿಸಿರಿ :**

೧. ನೌಕಾಸೇನೆ :– ಭಾರತೀಯ ನೌಕಾಸೇನೆ ಭೂಸೇನೆಯಷ್ಟೇ ಹಳೆಯದು. ಜಲಮಾರ್ಗದಲ್ಲಿ ವೈರಿಗಳನ್ನು ತಡೆಯಲು ನೌಕಾಸೇನೆ ಬಳಕೆಯಾಗುತ್ತದೆ.

ಇಲ್ಲಿ ವಾಕ್ಯದ ಶಿರೋನಾಮೆಯ ಅನಂತರ ವಿವರಣಾತ್ಮಕ ಚಿಹ್ನೆ (:–) ಬಳಕೆಯಾಗಿದೆ. ಅಭಿಪ್ರಾಯದ ವಿವರಣೆ ಇಂತಿದೆ ಎನ್ನುವುದನ್ನು ತಿಳಿಸುವ ಸಂದರ್ಭದಲ್ಲಿ ಈ ಚಿಹ್ನೆ ಬಳಕೆಯಾಗುತ್ತದೆ.

೨. ಒಂದು ಬಿಲದೊಳಗೆ 'ಹಿರಣ್ಯರೋಮ' ಎಂಬ ಮೂಷಿಕವು ಮನೆಮಾಡಿಕೊಂಡಿತ್ತು.

ಮೇಲಿನ ವಾಕ್ಯದಲ್ಲಿ 'ಹಿರಣ್ಯರೋಮ' ಈ ಪದಕ್ಕೆ ವಾಕ್ಯವೇಷ್ಟನ ಚಿಹ್ನೆ (' ') ಬಳಕೆಯಾಗಿದೆ. ಇದು ಪಾರಿಭಾಷಿಕ/ಪ್ರಧಾನ/ವಿಶಿಷ್ಟ ಪದಗಳನ್ನು ಬರೆಯುವಾಗ ಬಳಕೆಯಾಗುತ್ತದೆ.

೩. "ಸ್ವಾಮಿ, ನನಗೆ ಅದೃಷ್ಟವಿಲ್ಲ. ಈಗಲೂ ನನ್ನ ಹೃದಯ ಅವನಿಗಾಗಿ ಮಿಡಿಯುತ್ತಿದೆ. ಗಂಧರ್ವಸೇನ ನನ್ನ ಪ್ರೀತಿಯ ಕತ್ತೆ" ಎಂದು ಮಡಿವಾಳ್ತಿ ಬೊಬ್ಬಿಟ್ಟು ಅತ್ತಳು.

ಮೇಲಿನ ವಾಕ್ಯದಲ್ಲಿ ಉದ್ಧರಣ ಚಿಹ್ನೆ (" ") ಬಳಕೆಯಾಗಿದೆ. ಇದು ಬರವಣಿಗೆಯಲ್ಲಿ ಇನ್ನೊಬ್ಬರ ಹೇಳಿಕೆಯನ್ನು ಯಥಾವತ್ತಾಗಿ ಹೇಳುವಾಗ ಬಳಕೆಯಾಗುತ್ತದೆ.

೪. ನರಿಯು ಕೊಕ್ಕರೆ(ನೀರುಹಕ್ಕಿ)ಯನ್ನು ಹಿಡಿಯಲು ಹೊಂಚು ಹಾಕಿತು.

ಮೇಲಿನ ವಾಕ್ಯದಲ್ಲಿ ಆವರಣ ಚಿಹ್ನೆ (   ) ಬಳಕೆಯಾಗಿದೆ. ಇದು ಹೆಚ್ಚಿನ ವಿವರಣೆಗಳನ್ನು, ಅರ್ಥಗಳನ್ನು ನೀಡುವ ಸಂದರ್ಭದಲ್ಲಿ ಬಳಕೆಯಾಗುತ್ತದೆ.

## ಅಭ್ಯಾಸಗಳು

### ಅ. ಪದಗಳ ಅರ್ಥ ಬರೆಯಿರಿ.

೧. ಉಪಕರಿಸು  ೨. ಮೊರೆವ  ೩. ನಿರಾಳ  ೪. ಸಾಧಿತ  ೫. ಬಹುರೂಪಿ

### ಆ. ಕೊಟ್ಟಿರುವ ವಚನವನ್ನು ಪೂರ್ಣಗೊಳಿಸಿರಿ:

೧. ಎನಿತು ಭಾಷೆಗಳ ______________________________

______________________________ಮಿಡಿತವರಿಯದನ್ನಕ?

______________________________

____________________ಹೃದಯೇಶ ಸೋಮೇಶಾ.

### ಇ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಯಾವ ಚಾಳಿಯನ್ನು ದೂರವಿಡಿ ಎಂದು ಅಮೃತ ಸೋಮೇಶ್ವರರು ಹೇಳುತ್ತಾರೆ?

೨. ಹೃದಯದ ಬೆಸುಗೆ ಸಾಧಿತವಾಗುವುದು ಯಾವಾಗ?

೩. ಅಂಕಿತನಾಮವು ವಚನದ ಯಾವ ಭಾಗದಲ್ಲಿ ಬರುತ್ತದೆ?

೪. ನಾವು ಮೊದಲು ಯಾವ ಭಾಷೆಯನ್ನು ಕಲಿಯಬೇಕು?

೫. ಜನ ಕೆರಳಿ ಜರೆಯುವುದು ಯಾವಾಗ?

### ಈ. ಈ ವಚನವನ್ನು ಕಂಠಪಾಠ ಮಾಡಿರಿ.

ಒಂಬತ್ತು ತಡವೆ ..............................................................................

..........................................................ಹೃದಯೇಶ ಸೋಮೇಶಾ॥

### ಉ. ಕೆಳಗಿನ ಚಿಹ್ನೆಗಳನ್ನು ಗಮನಿಸಿ ಅದರ ಹೆಸರು ಬರೆಯಿರಿ.

೧. ;  ೨. '.....'  ೩. (.......)  ೪. "......"  ೫. !

## ಭಾಷಾ ಆಟ.

ಅ. ಕೆಳಗಿನ ಅಕ್ಷರವೃಂದದಲ್ಲಿ ಹತ್ತು ಜನ ವಚನಕಾರರು ಅಡಗಿಕೊಂಡಿದ್ದಾರೆ ನಿಮಗೆ ಸಾಧ್ಯವಾದಷ್ಟು ಹೆಸರನ್ನು ಹುಡುಕಿ ಇಲ್ಲಿ ಬರೆಯಿರಿ.

| | | | | | | | |
|---|---|---|---|---|---|---|---|
| ಬ | ಸಿ | ದ್ದ | ಯ್ಯ | ಮಾ | ಕ | ಕ್ಕ | ಯ್ಯ |
| ಅ | ಸ | ಹಾ | ಪು | ದ | ಚೆ | ನ್ನ | ಯ್ಯ |
| ಕ್ಕ | ವ | ಣ್ಣ | ರಾ | ಣಿ | ಕ | ಸಿ | ಜ |
| ಮ | ಹಾ | ಮ | ಡಿ | ವಾ | ಳ | ದ್ಧ | ರ |
| ದಾ | ದೇ | ವಿ | ಪ್ರ | ಭು | ಮಾ | ರಾ | ಮ |
| ಸಿ | ಅ | ಲ್ಲ | ಮ | ಕ | ಚ | ಯ್ಯ | ಕ |
| ಮ | ಯ್ಯ | ಚ | ನ್ನ | ಬ | ಸ | ವ | ಣ್ಣ |

## ಯೋಜನೆ

- ಐದು ವಚನಗಳನ್ನು ಸಂಗ್ರಹಿಸಿರಿ. ಅವುಗಳ ಸಾರಾಂಶವನ್ನು ಬರೆಯಿರಿ.

## ಓದಿಗೆ ಮನ್ನಣೆ :

- ಬಸವಣ್ಣ ಮತ್ತು ಅಕ್ಕಮಹಾದೇವಿಯವರ ವಚನಗಳನ್ನು ಓದಿರಿ.
- ಆಧುನಿಕ ವಚನಗಳನ್ನು ಸಂಗ್ರಹಿಸಿ ಓದಿರಿ.
- ಗ್ರಂಥಾಲಯದಲ್ಲಿರುವ ವಚನ ಸಾಹಿತ್ಯ ಕೃತಿಗಳನ್ನು ಓದಿರಿ.

## ಶುಭ ನುಡಿ :

- ಹಿರಿಯರಿಂದ ಬಂದ ಅನುಭವದ ನುಡಿಗಳು ಯುವಜನಾಂಗಕ್ಕೆ ಅಮೂಲ್ಯ ಸೊತ್ತು.
- ಒಂದು ಹೃದಯವನ್ನು ಅರ್ಥಮಾಡಿಕೊಳ್ಳುವುದು ಇನ್ನೊಂದು ಹೃದಯದಿಂದ ಮಾತ್ರ ಸಾಧ್ಯ.
- ಪರಿಶುದ್ಧ ಹೃದಯವು ಬದುಕನ್ನು ರೂಪಿಸುತ್ತದೆ.

# ಆ ಮಾತು ಈ ಮಾತು

ನವಿಲೂರಿನಲ್ಲಿ ಕಲೋತ್ಸವದ ಸಂಭ್ರಮ. ಊರಿಗೆ ಊರೇ ಸಿಂಗಾರಗೊಂಡಿತ್ತು. ಕಲೋತ್ಸವದ ಅಂಗವಾಗಿ ವೈವಿಧ್ಯಮಯ ಕಾರ್ಯಕ್ರಮಗಳನ್ನು ಆಯೋಜಿಸಲಾಗಿತ್ತು. ವರ್ಣರಂಜಿತವಾದ ವೇದಿಕೆ ಸಜ್ಜಾಗಿತ್ತು. ಜನರೆಲ್ಲ ಕಿಕ್ಕಿರಿದು ಕಾರ್ಯಕ್ರಮ ನೋಡಲು ವೇದಿಕೆಯ ಮುಂಭಾಗದಲ್ಲಿ ಸೇರಿದ್ದರು. ನಿರೂಪಕರು ಮುಂದಿನ ಕಾರ್ಯಕ್ರಮದ ಬಗ್ಗೆ ಮಾತು ಆರಂಭಿಸಿದರು :

"ಎಲ್ಲರಿಗೂ ನಮಸ್ಕಾರ, ಪೂಜ್ಯ ಗುರುಹಿರಿಯರೆ, ಆತ್ಮೀಯ ಸಹೋದರ ಸಹೋದರಿಯರೆ, ಪ್ರೀತಿಯ ಪುಟಾಣಿಗಳೆ ನಿಮಗೆಲ್ಲರಿಗೂ ಕಲೋತ್ಸವಕ್ಕೆ ಆದರದ ಸ್ವಾಗತ. ಇಂದಿನ ಕಲೋತ್ಸವದಲ್ಲಿ ನಾನಾ ಸ್ಪರ್ಧೆಗಳನ್ನು ಏರ್ಪಡಿಸಿದ್ದೇವೆ. ಮೊದಲನೆಯ ಸ್ಪರ್ಧೆ 'ಆ ಮಾತು ಈ ಮಾತು'. ಇದರ ನಿಯಮಗಳು ಹೀಗಿವೆ: ಒಂದು ತಂಡದಲ್ಲಿ ನಾಲ್ವರು ಸ್ಪರ್ಧಾಳುಗಳು ಇರುವರು. ಒಂದು ಸನ್ನಿವೇಶವನ್ನು ಕುರಿತು ಎರಡು ರೀತಿಯಲ್ಲಿ ಇಬ್ಬಿಬ್ಬರು ಸಂಭಾಷಣೆ ನಡೆಸುವರು. ಈಗ ಸ್ಪರ್ಧೆ ಪ್ರಾರಂಭ. ಮೊದಲನೆಯ ತಂಡಕ್ಕೆ ವಿಷಯ– 'ಅಜ್ಜಿ ಮೊಮ್ಮಗನ ಸಂಭಾಷಣೆ.' ಎಲ್ಲರೂ ಸಾವಧಾನದಿಂದ ಕುಳಿತು ಸಂಭಾಷಣೆಯನ್ನು ಕೇಳಿ ಆನಂದಿಸಬೇಕಾಗಿ ಮನವಿ ಮಾಡಿಕೊಳ್ಳುತ್ತೇನೆ".

[ಅಜ್ಜಿ–ಮೊಮ್ಮಗನ ಇಬ್ಬರು ಪಾತ್ರಧಾರಿಗಳು ವೇದಿಕೆಗೆ ಬಂದು 'ಆ ಮಾತು' ಸಂಭಾಷಣೆಯನ್ನು ಶುರುಮಾಡುವರು.]



## ಸನ್ನಿವೇಶ–೧ (ಅ)

**ಅಜ್ಜಿ** : ಏ... ಮೊಮ್ಮಗನೇ, ಬಾರೋ ಇಲ್ಲಿ. ಎಲ್ಲಿ ಹಾಳಾಗಿ ಹೋಗಿದ್ದೀಯಾ?

**ಮೊಮ್ಮಗ** : ಏ ಅಜ್ಜಿ, ಯಾಕೆ ಸುಮ್ಮನೆ ವಟಗುಟ್ಟುತ್ತಲೇ ಇರುತ್ತೀಯಾ? ಏನು ಬೇಕು ಹೇಳು?

**ಅಜ್ಜಿ** : ಎಲೆ, ಅಡಿಕೆ, ಹೊಗೆಸೊಪ್ಪು ಅಗಿದು ಗಂಟಲಿಗೆ ಸಿಕ್ಕಿ ಹಾಕಿಕೊಂಡಿದೆ. ಕುಡಿಯುವುದಕ್ಕೆ ಬೇಗ ನೀರು ತಕ್ಕೊಂಡು ಬಾರೋ.

**ಮೊಮ್ಮಗ** : ನಾನು ಇಲ್ಲಿ ಟಿ.ವಿ.ನೋಡ್ತಾ ಇದ್ದೀನಿ. ಕಿರಿಕಿರಿ ಮಾಡಬೇಡ. ಎದ್ದು ತಕ್ಕೋ ಅಜ್ಜಿ.





**ಅಜ್ಜಿ** : ಟಿ.ವಿ. ಆಮೇಲೆ ನೋಡುವೆಯಂತೆ ಬಾರೋ, ಗಂಟಲು ಹಿಡಿದು ಉಸಿರು ಕಟ್ಟುತ್ತಿದೆ ಕಣೋ.

**ಮೊಮ್ಮಗ** : ಹೊಗೆಸೊಪ್ಪು ತಿನ್ನಬೇಡ. ರೋಗ ಬರುತ್ತೆ ಅಂದ್ರೂ ತಿಂತೀಯಾ! ಈಗ ನನ್ನನ್ನೆ ಬೈತೀಯಾ? ನಿನಗೆ ಹಂಗೇ ಆಗಬೇಕು, ಅನುಭವಿಸು.

**ಅಜ್ಜಿ** : ಏ ಕೆಲ್ಸಕ್ಕೆ ಬಾರದವನೆ! ಸಹಾಯ ಮಾಡೋ ಬುದ್ಧಿನೇ ಇಲ್ವಲ್ಲ ನಿಂಗೆ.. ನೀರು ಕೊಡೋ ಅಂತ ಕೇಳಿದ್ರೆ ಟಿ.ವಿ. ನೋಡ್ತಾ ಇದ್ದೇನೆ ಅಂತಿಯಲ್ಲ.

**ಮೊಮ್ಮಗ** : ಅಜ್ಜಿ... ಯಾವಾಗಲೂ ಇದೇ ಗೋಳು ನಿನ್ದು. ತಗೋ ನೀರು. ಎರ್ರ್ಕೊ ನಿನ್ನ ಗಂಟಲಿಗೆ. ಮತ್ತೆ ಮತ್ತೆ ಕರಿಯಬೇಡ.

**ಅಜ್ಜಿ** : ನಿನ್ನ ಅಪ್ಪ ಹಿಂಗಿರಲಿಲ್ಲ. ನೀನ್ಯಾಕೆ ಇಂಥ ಬುದ್ಧಿ ಕಲ್ತೆ?

**ಮೊಮ್ಮಗ** : ಅಪ್ಪನನ್ನೇ ಕೇಳು ಹೋಗು! ನನ್ನನ್ನ ಏನ್ ಕೇಳ್ತಿ?

**ಅಜ್ಜಿ** : ಅಯ್ಯೋ .....ಇವ ನನ್ನ ಮೊಮ್ಮಗನಾ!

[ 'ಆ ಮಾತು' ಪಾತ್ರಧಾರಿಗಳು ನಿರ್ಗಮಿಸುವರು. 'ಈ ಮಾತು' ಅಜ್ಜಿ ಮೊಮ್ಮಗ ವೇದಿಕೆಗೆ ಬಂದು ಸಂಭಾಷಣೆ ಪ್ರಾರಂಭಿಸುವರು.]

## ಸನ್ನಿವೇಶ–೧ (ಆ)

**ಅಜ್ಜಿ** : ಏ ರಾಜಾ, ಎಲ್ಲಿದ್ದೀಯಾ ಕಂದಾ?

**ಮೊಮ್ಮಗ** : ಅಜ್ಜಿ... ನಾ ಇಲ್ಲೇ ಇದ್ದೀನಿ. ಇಗೋ ಬಂದೆ. ಏನಾದರೂ ಬೇಕಿತ್ತಾ ಅಜ್ಜಿ?

**ಅಜ್ಜಿ** : ಹೌದಪ್ಪ ಎಲೆ, ಅಡಿಕೆ, ಹೊಗೆಸೊಪ್ಪು ಅಗಿದು ಗಂಟಲಿಗೆ ಸಿಕ್ಕಿಹಾಕಿಕೊಂಡಿದೆ. ಕುಡಿಯುವುದಕ್ಕೆ ಬೇಗ ನೀರು ಕೊಡು ರಾಜ.

**ಮೊಮ್ಮಗ** : ಅಜ್ಜಿ... ಹೊಗೆಸೊಪ್ಪು ತಿನ್ನಬೇಡ, ರೋಗ ಬರುತ್ತದೆ ಅಂತ ಎಷ್ಟು ಸಲ ಹೇಳಿಲ್ಲ, ಆದರೂ ನೀನು ತಿನ್ನೋದು ಬಿಡ್ತಾ ಇಲ್ಲ. ಅದು ಕೆಟ್ಟ ಅಭ್ಯಾಸ ಅಜ್ಜಿ. ಅಪ್ಪನಿಗೆ ಹೇಳುತ್ತೇನೆ ನೋಡು.

**ಅಜ್ಜಿ** : ಆಯ್ತಪ್ಪ. ಇನ್ನು ಮುಂದೆ ಹಾಗೆ ಮಾಡ್ತೀನಿ. ಬೇಗ ನೀರು ಕೊಡೊ.

**ಮೊಮ್ಮಗ** : ತಗೋ ಅಜ್ಜಿ ನೀರು. ನಿಧಾನವಾಗಿ ಕುಡಿ. ಅಜ್ಜಿ, ನಿನಗೆ ಇನ್ನೇನಾದರೂ ಬೇಕಿತ್ತಾ? ನಾನು ಆಟ ಆಡೋಕೆ ಹೊರಗೆ ಹೋಗಲಾ......

**ಅಜ್ಜಿ** : ಇನ್ನೇನು ಬೇಡಪ್ಪ, ನೀನು ಹೋಗಿ ಆಟ ಆಡಿಕೊಂಡು ಬಾ. ಹುಷಾರು ಕಂದ.

[ನಿರ್ಗಮನ]

[ಜನರು ಚಪ್ಪಾಳೆ ತಟ್ಟಿ ಸಂತೋಷ ವ್ಯಕ್ತಪಡಿಸಿದರು. ನಿರೂಪಕರು ಎರಡನೆಯ ತಂಡವನ್ನು ವೇದಿಕೆಗೆ ಬರ ಮಾಡಿದರು.]

[ಎರಡನೆಯ ತಂಡದ 'ಆ ಮಾತು' ಪ್ರಾರಂಭ. ಅವರಿಗೆ ಸಿಕ್ಕ ವಿಷಯ. 'ಬಸ್ ಚಾಲಕ ಮತ್ತು ಮೋಟಾರ್ ಬೈಕ್ ಸವಾರ']



## ಸನ್ನಿವೇಶ–೨ (ಅ)

**ಬಸ್ ಚಾಲಕ** : ಏಯ್, ನಿಲ್ಲೋ ಬೈಕು. ಕಣ್ಣು ಕಾಣಿಸೋದಿಲ್ವಾ? ರಸ್ತೆ ಮಧ್ಯಕ್ಕೆ ನುಗ್ಗೀಯಲ್ಲ! ತಲೆಯೊಳಗೇನು ಸಗಣಿ ತುಂಬಿಕೊಂಡಿದ್ಯಾ?

**ಬೈಕ್ ಸವಾರ** : ಹಾರನ್ ಮಾಡದೇ ಬಂದು ನನ್ನನ್ನೆ ದಬಾಯಿಸುತ್ತೀಯಾ? ಅಕ್ಕಪಕ್ಕ ಬರುವ ವಾಹನಗಳನ್ನು ನೋಡಿಕೊಂಡು ಬಸ್ಸು ಓಡಿಸು, ಜಾಸ್ತಿ ಮಾತಾಡಬೇಡ.....

**ಚಾಲಕ** : ನಿನ್ನ ಕಿವಿ ಕಿವುಡಾ? ಹಾರನ್ ಸರಿಯಾಗಿ ಕೇಳಿಸ್ಕೊ, ಕಿವಿಗೆ ವೈರ್ ಹಾಕ್ಕೊಂಡು ಹಾಡು ಕೇಳ್ತಿದ್ದೀಯಲ್ಲ. ಅದನ್ನು ಮೊದ್ಲು ಕಿತ್ತು ಬಿಸಾಕಿ ರಸ್ತೆ ನೋಡ್ಕೊಂಡು ಗಾಡಿ ಓಡಿಸು.



**ಸವಾರ** : ಅದನ್ ಕೇಳೋಕೆ ನೀನ್ಯಾರು? ನನ್ನಿಷ್ಟ, ನಿನ್ನ ಅಪ್ಪನ್ದ ರಸ್ತೆ. ನನಗೆ ಬುದ್ಧಿ ಹೇಳೋದಕ್ಕೆ ಬಂದು ಬಿಟ್ಟ.

**ಚಾಲಕ** : ರಸ್ತೆ ನಿನ್ನಪ್ಪನ್ದೂ ಅಲ್ಲ, ನನ್ನಪ್ಪನ್ದೂ ಅಲ್ಲ. ಸಾರ್ವಜನಿಕರದ್ದು, ತಲೆಯಲ್ಲಿ ನಡೆಯಬೇಡ. ನೀನು ಹಿಂಗೆ ಆಡಿದ್ರೆ ಬೇಗ ಪ್ರಾಣ ಕಳ್ಕೋತೀಯಾ.

**ಬೈಕ್ ಸವಾರ** : ಹೋಗಲೋ ಬಾಯಿ ಮುಚ್ಕೊಂಡು. ಇಲ್ದೇ ಇದ್ರೆ ಕೆಳಗೆ ಎಳ್ಕೊಂಡು ನಾಲ್ಕು ಬಾರಿಸಬೇಕಾಗುತ್ತೆ.

**ಚಾಲಕ** : ನಿನ್ನ ಜೊತೆ ಮಾತನಾಡುವವರಿಗೆ ಬುದ್ಧಿ ಇಲ್ಲ. ಎಲ್ಲಾದರೂ ಹಾಳಾಗಿ ಹೋಗು.............



## ಸನ್ನಿವೇಶ-೨ (ಆ)

[ಎರಡನೆಯ ತಂಡದ 'ಈ ಮಾತು' ಸಂಭಾಷಣೆ]

**ಬಸ್ ಚಾಲಕ** : ಏ ಬೈಕ್, ನಿಲ್ಸಿ ಸ್ವಾಮಿ. ಇಷ್ಟು ಜೋರಾಗಿ ಹಾರ್ನ್ ಮಾಡ್ತಾ ಇದ್ದೇನೆ. ಹೀಗೆ ನುಗ್ಗಿದ್ರೆ ಏನಪ್ಪಾ ಮಾಡ್ಲಿ?

**ಬೈಕ್ ಸವಾರ** : ಕ್ಷಮಿಸಿ ಸಾರ್, ಕೇಳಿಸ್ಲಿಲ್ಲ. ಹಾಡು ಕೇಳಿಕೊಂಡು ಬರ್ತಾ ಇದ್ದೆ. ದಯವಿಟ್ಟು ಕ್ಷಮಿಸಿ.

ಚಾಲಕ : ನಿಧಾನವಾಗಿ ಬಸ್ ಓಡಿಸ್ತಿದ್ದೆ, ಸರಿಹೋಯಿತು. ನಿಮ್ಮ ಹಾಗೆ ನಾನೂ ವೇಗವಾಗಿ ಬರುತ್ತಿದ್ದರೆ ಏನಾಗ್ತಿತ್ತು ಹೇಳಿ? ಹೊಡ್ಕೊಂಡು ಹೋಗುತ್ತಿತ್ತು, ಅಷ್ಟೆ. ಅದೂ ಅಲ್ಲದೆ ಹೀಗೆ ಕಿವಿಗೆ ಇಯರ್ ಫೋನ್ ಹಾಕ್ಕೊಂಡು ಹಾಡು ಕೇಳ್ತಾ ಗಾಡಿ ಓಡಿಸೋದು ತಪ್ಪಲ್ವ. ಇನ್ನಾದರೂ ನೋಡ್ಕೊಂಡು ಗಾಡಿ ಓಡಿಸಿ.

ಸವಾರ : ಸಾರ್, ಇವತ್ತೇ ಕೊನೆ. ಇನ್ನು ಮುಂದೆ ಗಾಡಿ ಓಡಿಸುವಾಗ ಕಿವಿಗೆ ಇಯರ್ ಫೋನ್ ಹಾಕ್ಕೊಳ್ಳೋದಿಲ್ಲ.

ಚಾಲಕ : ಸಾರ್ವಜನಿಕ ರಸ್ತೆಯಲ್ಲಿ ಗಾಡಿ ಓಡಿಸುವಾಗ ರಸ್ತೆ ಎಲ್ಲರಿಗೂ ಸೇರಿದೆ ಎಂಬ ತಿಳುವಳಿಕೆ ಬೇಕಲ್ಲವೇ?

ಸವಾರ : ಹೌದು ಸಾರ್, ರಸ್ತೆಯ ನಿಯಮವನ್ನು ನಮ್ಮಂಥವರು ಮರ್ತೇ ಬಿಟ್ಟಿದ್ದಾರೆ. ಇವತ್ತು ನನ್ನ ಪ್ರಾಣ ಉಳಿಸಿದ್ರಿ. ನನಗಿದೊಂದು ಪಾಠ. ಇನ್ನು ಯಾವತ್ತೂ ರಸ್ತೆ ನಿಯಮ ಮೀರೋದಿಲ್ಲ. ಜೀವ ಉಳಿಸಿದ್ದಕ್ಕೆ ಧನ್ಯವಾದಗಳು ಸರ್.

ಚಾಲಕ : ಅಗೋ ಸಿಗ್ನಲ್ ಬಿತ್ತು. ಹೋಗೋಣವಾ.

ಸವಾರ : ನಮಸ್ಕಾರ.

ಸ್ಪರ್ಧಿಗಳ 'ಆ ಮಾತು– ಈ ಮಾತು'ಗಳ ಶೈಲಿ ಪ್ರೇಕ್ಷಕರಿಗೆ ಖುಷಿಕೊಟ್ಟಿತು. ಇದೇ ರೀತಿ ಇನ್ನಷ್ಟು ತಂಡಗಳು ಸ್ಪರ್ಧೆಯಲ್ಲಿ ಭಾಗವಹಿಸಿದವು. ಉತ್ತಮವಾಗಿ ಸಂಭಾಷಣೆ ನಡೆಸಿಕೊಟ್ಟ ತಂಡಕ್ಕೆ ತೀರ್ಪುಗಾರರು ಬಹುಮಾನ ಪ್ರಕಟಿಸಿದರು. 'ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ' ಎಂಬ ನಾಣ್ಣುಡಿಯನ್ನು ನೆರೆದಿದ್ದ ಜನರು ಅರ್ಥೈಸಿಕೊಂಡರು. ವಿರಾಮದ ಬಳಿಕ ನಿರೂಪಕರು ಮುಂದಿನ ಸ್ಪರ್ಧೆಯನ್ನು ಪ್ರಕಟಿಸಿದರು.



ಕ್ಷೇತ್ರ : ಮಾತನಾಡುವುದು.

ಸಾಮರ್ಥ್ಯ : ಇತರರೊಡನೆ ಮಾತನಾಡುವಾಗ ಗೌರವ ಸೂಚಕಪದಗಳನ್ನು ಬಳಸುವುದು.

**ಆಶಯ :**

ಮಾತನಾಡುವ ಭಾಷೆ ಒಂದೇ ಆದರೂ ಮಾತನಾಡುವ ಶೈಲಿ, ಬಳಸುವ ಪದಗಳು ಸಾಮಾನ್ಯವಾಗಿ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆ ಬೇರೆಯಾಗಿರುತ್ತವೆ. ಭಾರತೀಯ ಸಂಸ್ಕೃತಿಯಲ್ಲಿ ಒಬ್ಬರನ್ನೊಬ್ಬರು ಗೌರವಿಸುವುದು, ಅತಿಥಿಗಳನ್ನು ಸತ್ಕರಿಸುವುದು ಸಂಪ್ರದಾಯಬದ್ಧವಾಗಿ ಹಿಂದಿನಿಂದಲೂ ಬೆಳೆದು ಬಂದಿದೆ. ಅದರ ಜೊತೆಗೇನೆ 'ನಾನು ಯಾರಿಗೇನು ಕಡಿಮೆ' ಎನ್ನುವ ಅನಾರೋಗ್ಯಕರ ಅಹಂ ಬೆಳೆಯುತ್ತಿದೆ. ನೆಮ್ಮದಿಯ ಬದುಕು ಸಮಾಜದಲ್ಲಿ ಎಲ್ಲರಿಗೂ ಇರಬೇಕು ಎನ್ನುವುದಾದರೆ ಮಾತಿನ ಶೈಲಿ, ಬಳಸುವ ಶಬ್ದಗಳು, ವಿನಯ ಹಾಗೂ ತಾಳ್ಮೆಯಿಂದ ಕೂಡಿರಬೇಕು. ಈ ಆಶಯವನ್ನು ಪ್ರಸ್ತುತ ಗದ್ಯಭಾಗದಲ್ಲಿ ನಿರೀಕ್ಷಿಸಲಾಗಿದೆ.

## ಅರ್ಥ ತಿಳಿಯಿರಿ :

ಆತ್ಮೀಯ–ಹೃದಯಕ್ಕೆ ಹತ್ತಿರವಾದ. ಸನ್ನಿವೇಶ–ಸಂದರ್ಭ, ಪರಿಸರ. ವಟಗುಟ್ಟು–ಗೊಣಗು, ಕಿರಿಕಿರಿ ಮಾತನಾಡು. ದಬಾಯಿಸು–ಗದರಿಸು, ನೂಕು.

## ವಿವರ ತಿಳಿಯಿರಿ :

- ನಿರೂಪಕ– ಕಾರ್ಯಕ್ರಮಕ್ಕೆ ನಿರ್ದಿಷ್ಟವಾದ ರೂಪುಕೊಟ್ಟು ನಡೆಸಿಕೊಂಡು ಹೋಗುವಾತ.
- ತಲೆಯಲ್ಲಿ ನಡೆ– ಅಹಂಕಾರದಿಂದ ವರ್ತಿಸು.

## ವ್ಯಾಕರಣ ಮಾಹಿತಿ

**ಸಮಾಸ :** ಕೆಳಗಿನ ಪದಗಳನ್ನು ಗಮನಿಸಿರಿ.

- ಅರಸನ + ಮನೆ = ಅರಮನೆ.
- ಹಿರಿದು + ಮರ = ಹೆಮ್ಮರ.
- ಗಿಡವೂ + ಮರವೂ + ಬಳ್ಳಿಯೂ = ಗಿಡಮರಬಳ್ಳಿಗಳು.
- ಕೈಯನ್ನು + ಮುಗಿ = ಕೈಮುಗಿ.

ಎರಡು ಅಥವಾ ಎರಡಕ್ಕಿಂತ ಹೆಚ್ಚು ಪದಗಳು ಅರ್ಥಕ್ಕೆ ಲೋಪಬಾರದ ರೀತಿಯಲ್ಲಿ ಸಮಾಸ ಪದಗಳಾಗುತ್ತವೆ. ಇವುಗಳಿಗೆ 'ಸಮಸ್ತಪದಗಳು' ಎಂದೂ ಕರೆಯುತ್ತಾರೆ. ಸಮಾಸಪದವನ್ನು ಬಿಡಿಸಿ ಬರೆಯುವುದಕ್ಕೆ 'ವಿಗ್ರಹ ವಾಕ್ಯ' ಎನ್ನುವರು.

ಉದಾ: ತಲೆಯಲ್ಲಿ + ನೋವು = ತಲೆನೋವು

ಇಲ್ಲಿ 'ತಲೆನೋವು' ಎಂಬ ಪದವನ್ನು 'ವಿಗ್ರಹವಾಕ್ಯ' ಮಾಡಿ ಬರೆಯಲಾಗಿದೆ. ಮೊದಲನೆಯ ಪದವನ್ನು 'ಪೂರ್ವಪದ'ವೆಂದೂ ಎರಡನೆಯ ಪದವನ್ನು 'ಉತ್ತರಪದ'ವೆಂದೂ ಕರೆಯುವರು.

### ಸಮಾಸಗಳಲ್ಲಿ ಏಳು ವಿಧ.

- ತತ್ಪುರುಷ ಸಮಾಸ
- ಕರ್ಮಧಾರಯ ಸಮಾಸ
- ದ್ವಿಗು ಸಮಾಸ
- ದ್ವಂದ್ವ ಸಮಾಸ
- ಅಂಶಿ ಸಮಾಸ
- ಬಹುವ್ರೀಹಿ ಸಮಾಸ
- ಕ್ರಿಯಾ ಸಮಾಸ

## ಅಭ್ಯಾಸಗಳು

ಅ. ಈ ಪದಗಳಿಗೆ ಗ್ರಾಂಥಿಕ ರೂಪ ಬರೆಯಿರಿ.

೧. ತಕ್ಕೊಂಡು  ೨. ಕೆಲ್ಸಕ್ಕೆ  ೩. ಹಿಂಗಿರಲಿಲ್ಲ  ೪. ನುಗ್ತೀಯಲ್ಲ  ೫. ಮೊದ್ಲು

ಆ. ಈ ಪದಗಳನ್ನು ಬಳಸಿ ಸ್ವಂತ ವಾಕ್ಯ ರಚಿಸಿರಿ.

೧)ವೈವಿಧ್ಯಮಯ  ೨)ವರ್ಣರಂಜಿತ  ೩)ಸ್ಪರ್ಧೆ  ೪)ಬಹುಮಾನ

ಇ. ಈ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

೧. ಕಲೋತ್ಸವ ಎಲ್ಲಿ ನಡೆಯುತ್ತಿತ್ತು?

೨. ಅಜ್ಜಿ ನೀರು ಕೇಳಿದಾಗ ಮೊಮ್ಮಗ ಏನನ್ನು ನೋಡುತ್ತಿದ್ದ?

೩. ಯಾವುದರಿಂದ ರೋಗ ಬರುತ್ತದೆ ಎಂದು ಮೊಮ್ಮಗ ಹೇಳುತ್ತಾನೆ?

೪. ಬೈಕ್ ಸವಾರ ಕಿವಿಗೆ ಏನನ್ನು ಹಾಕಿಕೊಂಡಿದ್ದ?

೫. ತೀರ್ಪುಗಾರರು ಯಾರಿಗೆ ಬಹುಮಾನ ಕೊಟ್ಟರು?

ಈ. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿರಿ.

೧. ನಿರೂಪಕರು ಏನೆಂದು ಸ್ವಾಗತ ಕೋರಿದರು?

೨. ಮೊಮ್ಮಗ ಅಜ್ಜಿಯ ಮೇಲೆ ಸಿಟ್ಟು ಮಾಡಿಕೊಳ್ಳಲು ಕಾರಣವೇನು?

೩. ಯಾವುದು ಕೆಟ್ಟ ಅಭ್ಯಾಸವೆಂದು ಅಜ್ಜಿಗೆ ಮೊಮ್ಮಗ ಹೇಳಿದನು?

೪. ಬಸ್ ಚಾಲಕ ಬೈಕ್ ಸವಾರನನ್ನು ಬೈಯಲು ಕಾರಣವೇನು?

೫. ಬೈಕ್ ಸವಾರ ಚಾಲಕನಿಗೆ ಏಕೆ ಧನ್ಯವಾದ ತಿಳಿಸಿದನು?

ಉ. ಈ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

೧. ಸಮಾಸ ಎಂದರೇನು?

೨. ವಿಗ್ರಹವಾಕ್ಯ ಎಂದರೇನು?

೩. ವಿಗ್ರಹವಾಕ್ಯದ ಮೊದಲ ಹಾಗೂ ಎರಡನೆಯ ಪದವನ್ನು ಏನೆಂದು ಕರೆಯುವರು?

೪. 'ತಲೆಯಲ್ಲಿ+ನೋವು' ಇದರಲ್ಲಿ ಪೂರ್ವಪದ ಯಾವುದು?

೫. 'ಹುರಿದ+ಕಡಲೆ' ಈ ವಿಗ್ರಹವಾಕ್ಯದಲ್ಲಿ ಉತ್ತರಪದ ಯಾವುದು?

## ಭಾಷಾ ಆಟ

**ಅ. ಈ ಕೆಳಕಂಡ ಸನ್ನಿವೇಶಗಳ ಸಂಭಾಷಣೆಯನ್ನು ಅಣಕು ಪ್ರದರ್ಶನ ಮಾಡಿರಿ.**

೧. ವೈದ್ಯ ಮತ್ತು ರೋಗಿ.

೨. ತರಕಾರಿ ವ್ಯಾಪಾರಿ ಮತ್ತು ಗ್ರಾಹಕ.

೩. ರೈತ ಮತ್ತು ಅಧಿಕಾರಿ.

೪. ಪ್ರವಾಸಕ್ಕೆ ತಂದೆಯ ಅನುಮತಿ ಕೇಳುವ ಮಗಳು.

**ಆ. ಹೊಂದಿಸಿ ಬರೆಯಿರಿ.**

| | |
|---|---|
| ೧. ಜೀಬ್ರಾ ಕ್ರಾಸ್ ಚಿಹ್ನೆ | ೧. ಶಾಲೆ ಇದೆ, ನಿಧಾನವಾಗಿ ಚಲಿಸಿರಿ. |
| ೨. ಆಸ್ಪತ್ರೆ ಸೂಚಿಸುವ ಚಿಹ್ನೆ | ೨. ಪಾದಚಾರಿಗಳು ರಸ್ತೆ ದಾಟುವುದು. |
| ೩. 'ಶಾಲೆ ಇದೆ' ಸೂಚಿಸುವ ಚಿಹ್ನೆ | ೩. ರೈಲು ಮಾರ್ಗ ಇದೆ. ಗಮನಿಸಿರಿ. |
| ೪. ರಸ್ತೆ ತಡೆ(ಹಂಪ್) ಸೂಚಿಸುವ ಚಿಹ್ನೆ | ೪. ಶಬ್ದ ಮಾಡದೆ ಚಲಿಸಿರಿ. |
| ೫. ರೈಲುಹಳಿ ಇರುವ ಚಿಹ್ನೆ | ೫. ರಸ್ತೆ ತಡೆ ಇದೆ. ನಿಧಾನ ಚಲಿಸಿರಿ. |

## ಯೋಜನೆ

೧. ರಸ್ತೆಯ ನಿಯಮಗಳು ಮತ್ತು ಸೂಚನೆಗಳು ಹಾಗೂ ಚಿಹ್ನೆಗಳ ಬಗ್ಗೆ ವರದಿ ತಯಾರಿಸಿರಿ.

೨. ಕನಿಷ್ಠ 'ಐವತ್ತು' ಆಡುಭಾಷೆಯ ಶಬ್ದಗಳಿಗೆ ಗ್ರಾಂಥಿಕ ರೂಪ ಬರೆಯಿರಿ.

ಗದ್ಯ ಪಾಠ–೬

# ಯಾಣದ ಕುರಿತೊಂದು ಪತ್ರ

ಸಲೀಂ, ರಾಗಿಣಿ, ಜೆನಿಫರ್ ಹಾಗೂ ಶಂಕರ ಪ್ರತಿದಿನ ಜೊತೆಯಾಗಿ ಓದಿಕೊಳ್ಳಲು ಗೆಳೆಯ ರಾಜುವಿನ ಮನೆಗೆ ಬರುತ್ತಿದ್ದರು. ಆಯಾ ದಿನ ಶಾಲೆಯಲ್ಲಿ ನಡೆದ ಪಾಠದ ಬಗ್ಗೆ ಚರ್ಚೆ ನಡೆಸುತ್ತಿದ್ದರು.

ಅದೊಂದು ಭಾನುವಾರ. ಎಲ್ಲರೂ ರಾಜುವಿನ ಮನೆಗೆ ಬಂದರು. ಸಲೀಂ ಗೆಳೆಯರ ಬಳಿ 'ಈಗ ನಾವೊಂದು ಆಟ ಆಡೋಣ. ಆ ಮೇಲೆ ಓದಿಕೊಳ್ಳೋಣ' ಎಂದನು. ಯಾವ ಆಟ ಎಂಬುದರ ಬಗ್ಗೆ ಜೋರಾಗಿ ಚರ್ಚೆ ನಡೆಯಿತು. ಆಗ ಒಳಗಿನಿಂದ ಬಂದ ರಾಜುವಿನ ಅಮ್ಮ 'ಯಾರೂ ಗಲಾಟೆ ಮಾಡಬೇಡಿ. ರಾಜುವಿನ ಅಪ್ಪ ಕಂಪ್ಯೂಟರ್‌ನಲ್ಲಿ ಏನೋ ಕೆಲಸ ಮಾಡುತ್ತಿದ್ದಾರೆ' ಎಂದು ಹೇಳಿ ಒಳಗೆ ಹೋದರು. ಆಗ ರಾಗಿಣಿ, 'ಈ ಸಲೀಂನಿಗೆ ಯಾವಾಗ್ಲೂ ಬರೀ ಆಟದ್ದೆ ಚಿಂತೆ. ನಿನ್ನೆ ಪದ್ಮಿನಿ ಮೇಡಂ ನಮಗೆಲ್ಲಾ ಕಂಪ್ಯೂಟರ್‌ನಲ್ಲಿ ವಿಶೇಷ ಪತ್ರ ಬರೆಯುವ ಬಗ್ಗೆ ಹೇಳಿಕೊಡಲಿಲ್ವೆ' ಎಂದು ವಿಷಯಕ್ಕೆ ಬಂದಳು. ಆಗ ಎಲ್ಲರೂ 'ಹೌದಲ್ವ' ಎಂದು ಪತ್ರ ಬರೆಯುವ ಕುರಿತ ಚರ್ಚೆಗೆ ತಿರುಗಿದರು. ಅಷ್ಟರಲ್ಲಿ ರಾಜುವಿನ ತಂದೆ ಸುಂದರ್ ಹೊರಗೆ ಬಂದರು. 'ಏನು ಮಕ್ಕಳೇ, ಏನು ನಡೆಸಿದ್ದೀರಿ?' ಎಂದು ಕೇಳಿದರು. ಅದಕ್ಕೆ ಚೂಟಿ ರಾಗಿಣಿಯು ಪದ್ಮಿನಿ ಮೇಡಂ ಹೇಳಿದ ಗೃಹಪಾಠದ ಬಗ್ಗೆ ತಿಳಿಸಿ, 'ಅದನ್ನು ಹೇಗೆ ಬರೆಯುವುದು ಎಂದು ತಿಳಿಯದೆ ಚರ್ಚೆ ಮಾಡ್ತಾ ಇದ್ದೇವೆ ಮಾಮ' ಎಂದಳು.



ಆಗ ಸುಂದರ್, 'ಬನ್ನಿ' ಎಂದು ಎಲ್ಲರನ್ನು ಕಂಪ್ಯೂಟರ್ ಕೊಠಡಿಗೆ ಕರೆದುಕೊಂಡು ಹೋಗಿ 'ಇ–ಅಂಚೆ' ಅಥವಾ 'ಇ–ಮೇಲ್' ಬಗ್ಗೆ ಕಂಪ್ಯೂಟರಿನಲ್ಲಿ ತೋರಿಸುತ್ತಾ 'ಇ–ಮೇಲ್' ಅಂದರೆ ಕಂಪ್ಯೂಟರ್ ಮೂಲಕ ಪತ್ರಗಳನ್ನು ಸಂದೇಶಗಳನ್ನು ವಿನಿಮಯ ಮಾಡಿಕೊಳ್ಳುವ ಒಂದು ಜನಪ್ರಿಯ ವಿಧಾನ ಎಂದರು. ಸಲೀಂ ಕುತೂಹಲದಿಂದ, 'ಅಂಕಲ್, ಇ–ಮೇಲ್ ಎಂದರೇನು? ಎಂದು ಕೇಳಿದನು. ಅದಕ್ಕೆ ಸುಂದರ್ 'ಇ'ಅಂದರೆ ಇಂಗ್ಲಿಷಿನಲ್ಲಿ 'ಇಲೆಕ್ಟ್ರಾನಿಕ್', 'ಮೇಲ್' ಎಂದರೆ 'ಅಂಚೆ' ಹಾಗಾಗಿ ಎಲೆಕ್ಟ್ರಾನಿಕ್ ಮೇಲ್‌ನ್ನು 'ಇ–ಅಂಚೆ' ಎನ್ನುತ್ತಾರೆ ಎಂದರು.

ಶಂಕರ್–"ಮಾಮ, ಇ–ಮೇಲ್‌ನ್ನು ಹೇಗೆ ಕಳಿಸ್ತಾರೆ? ಮತ್ತೆ ಇದನ್ನು ಎಲ್ಲಿ, ಯಾರು ಓದಬಹುದು?" ಎಂದು ಕೇಳಿದ. ಅದಕ್ಕೆ ಸುಂದರ್– "ನೋಡಿ ಮಕ್ಕಳೆ, ಮಾಮೂಲಿ ಅಂಚೆ ವ್ಯವಸ್ಥೆಯಂತೆ ಇಲ್ಲಿಯೂ ಪತ್ರ ತಲುಪಬೇಕಾದ ವಿಳಾಸಬೇಕು. ಇದಕ್ಕೆ 'ಇ–ಮೇಲ್' ವಿಳಾಸ ಅನ್ನುತ್ತಾರೆ. ನೀವು ನನಗೆ ಕಳುಹಿಸಿದ ಇ–ಮೇಲ್‌ನ್ನು ನಾನು ಕಂಪ್ಯೂಟರಿನಲ್ಲಿ ತೆರೆದು ಓದಬೇಕೆಂದರೆ ನನ್ನದೇ ಆದ 'ಗುಪ್ತ ಸಂಕೇತ' ಇರುತ್ತದೆ. ಅದನ್ನು ಬಳಸಿ ತೆರೆದು ಓದಬಲ್ಲೆ. ಈಗ ನಿಮಗೇನು ಬೇಕು? ಪದ್ಮಿನಿ ಮೇಡಂ ವಿಶೇಷ ಪತ್ರ ಬರೆದುಕೊಂಡು ಬರಲು ಹೇಳಿದ್ದಾರೆ. ಅಷ್ಟೇತಾನೆ? ಈಗ ನಿಮಗೊಂದು ವಿಶೇಷ ಪತ್ರ ತಯಾರಿಸಿ, ಕಳಿಸುತ್ತೇನೆ. ಅದನ್ನು ನಿಮ್ಮ ಶಾಲೆಯ ಕಂಪ್ಯೂಟರ್‌ನಲ್ಲಿ ತೆರೆದು ತೋರಿಸಿ" ಎಂದರು.

ಅದಕ್ಕೆ ರಾಗಿಣಿ, 'ಅದು ಹೇಗೆ ಮಾಮ!' ಎಂದಳು. ಆಗ ಸುಂದರ್ "ನನ್ನ ಮಗನಿಗೆ ಕಂಪ್ಯೂಟರ್ ಬಳಸುವ ಬಗ್ಗೆ ಸ್ವಲ್ಪ ಗೊತ್ತಿದೆ. ಅವನ ಹೆಸರಿನಲ್ಲಿ ಒಂದು ಇ-ಮೇಲ್' ತಯಾರಿಸಿ ಒಂದು ಗುಪ್ತ ಸಂಕೇತ ಕೊಡುತ್ತೇನೆ. ನೋಡುತ್ತಿರಿ" ಎಂದರು. ಸುಂದರ್ 'ಇ-ಮೇಲ್' ರಚಿಸುವುದನ್ನು ಮಕ್ಕಳು ಕುತೂಹಲದಿಂದ ಗಮನಿಸಿದರು. ಸುಂದರ್, ರಾಜುವಿನ ಹೆಸರಿನಲ್ಲಿ ಒಂದು ಇ-ಮೇಲ್ ವಿಳಾಸ ತಯಾರಿಸಿದರು. ಅದರ ಗುಪ್ತ ಸಂಕೇತವನ್ನು ರಾಜುವಿಗೆ ಮಾತ್ರ ಗುಟ್ಟಾಗಿ ತಿಳಿಸಿದರು. ಆಗ ಸಲೀಂ 'ಮಾಮ, ಅದೇಕೆ ಗುಪ್ತ ಸಂಕೇತವನ್ನು ರಾಜುವಿಗೆ ಮಾತ್ರ ಹೇಳಿದಿರಿ. ನಮಗೆ ಹೇಳಲಿಲ್ಲ ಯಾಕೆ?, ಎಂದ. ಅದಕ್ಕೆ ಸುಂದರ್, 'ನೋಡು ಸಲೀಂ, ಒಬ್ಬರ ಗುಪ್ತ ಸಂಕೇತ ಇನ್ನೊಬ್ಬರಿಗೆ ಗೊತ್ತಾಗಬಾರದು. ಗೊತ್ತಾದರೆ ಯಾರು ಬೇಕಾದರೂ ಪತ್ರ ಓದಬಹುದಲ್ವೆ? ಬೇರೆಯವರ ಪತ್ರ ನಾವು ಓದಬಾರದಲ್ವೆ? ಅದಕ್ಕಾಗಿ ಗುಪ್ತ ಸಂಕೇತ ಅವನಿಗೆ ಮಾತ್ರ ಹೇಳಿದ್ದು' ಎಂದರು.

rajusundar@gmail.com ಎಂಬುದು ರಾಜುವಿನ ಇ-ಮೇಲ್ ವಿಳಾಸ. ಮಕ್ಕಳೆ, ರಾಜುವಿನ ಇ-ಮೇಲ್ ವಿಳಾಸಕ್ಕೆ ನನ್ನ ಮೇಲ್‌ನಿಂದ ಚಾರಣಕ್ಕೆ ಪ್ರಸಿದ್ಧವಾದ ಯಾಣದ ಕೆಲವು ಚಿತ್ರ ಹಾಗೂ ವಿವರವನ್ನು ಕಳುಹಿಸುತ್ತೇನೆ' ಎಂದರು. ಅನಂತರ ಇ-ಮೇಲ್ ತೆರೆಯುವುದರ ಬಗ್ಗೆ ರಾಜುವಿಗೆ ತಿಳಿಸಿದರು. ರಾಜು ಇಮೇಲ್ ತೆರೆದ. ಆ ಲೇಖನವನ್ನು ರಾಜು ತನ್ನ ಗೆಳೆಯನಿಗೆ ಬರೆದ ಪತ್ರದಂತೆ ಬದಲಾಯಿಸಿಕೊಳ್ಳಲು ಸುಂದರ್ ಸಲಹೆ ನೀಡಿದರು.

ಮಕ್ಕಳೆಲ್ಲರು: 'ನೀವು ನಮಗೆ ಒಳ್ಳೆಯ ಮಾಹಿತಿ ಹೇಳಿದ್ದೀರಿ ಮಾಮ. ಇ-ಮೇಲ್ ಬಗ್ಗೆ ಹೇಳಿಕೊಟ್ಟು ಮಾದರಿ ಸಹಿತ ವಿವರಿಸಿದ್ದೀರಿ. ನಿಮಗೆ ಧನ್ಯವಾದಗಳು' ಎಂದು ಹೇಳಿ ಅಲ್ಲಿಂದ ಹೊರಟರು. ಮಾರನೆಯ ದಿನ ಮಕ್ಕಳೆಲ್ಲ ಶಾಲೆಗೆ ಬಂದರು. ಪದ್ಮಿನಿ ಮೇಡಂ, 'ಮಕ್ಕಳೇ ಶನಿವಾರ ನಾನು ಪತ್ರ ಲೇಖನದ ಬಗ್ಗೆ ತಿಳಿಸಿ, ವಿಶೇಷ ಪತ್ರ ಬರೆದುಕೊಂಡು ಬರಲು ಹೇಳಿದ್ದೆ. ಯಾರು ಈ ಪ್ರಯತ್ನ ಮಾಡಿದ್ದೀರಿ? ಎಂದರು. ಆಗ ರಾಜು, ರಾಗಿಣಿ, ಸಲೀಂ, ಜೆನಿಫರ್ ಹಾಗು ಶಂಕರ್ ಎದ್ದು ನಿಂತು, 'ಟೀಚರ್, ನಮ್ಮನ್ನು ಕಂಪ್ಯೂಟರ್ ಕೊಠಡಿಗೆ ಕರೆದುಕೊಂಡು ಹೋಗಿ, ಅಲ್ಲಿ ನಿಮಗೆ ನಮ್ಮ ವಿಶೇಷ ಪತ್ರ ತೋರಿಸುತ್ತೇವೆ' ಎಂದರು.

ಎಲ್ಲರೂ ಕಂಪ್ಯೂಟರ್ ಕೊಠಡಿಗೆ ಹೋದರು. ರಾಜು ಕಂಪ್ಯೂಟರ್ ತೆರೆದು ಯಾರಿಗೂ ಕಾಣದ ಹಾಗೆ ತನ್ನ ಗುಪ್ತ ಸಂಕೇತ ಬಳಸಿ 'ಇ-ಮೇಲ್'ನಲ್ಲಿದ್ದ ಪತ್ರವನ್ನು ತೆರೆದು ತೋರಿಸಿದ. ಅದರಲ್ಲಿನ ಯಾಣದ ಚಿತ್ರಗಳನ್ನು ಹಾಗೂ ಅದರ ವಿವರಗಳನ್ನು ರಾಗಿಣಿ ಮತ್ತು ಜೆನಿಫರ್ ಓದಿದರು.......





ಪ್ರೀತಿಯ ಸಲೀಂ, ಮಲೆನಾಡಿನ ಪ್ರವಾಸಿ ತಾಣಗಳಲ್ಲಿ ಗಗನಚುಂಬಿ ಹೆಬ್ಬಂಡೆಗಳ ತಾಣವಾದ ಯಾಣ ಕೂಡ ಒಂದು. ಶಿರಸಿಯಿಂದ ಯಾಣ ಎಂಬ ಹಳ್ಳಿ ತಲುಪಿ ಅಲ್ಲಿಂದ ೨ಕಿ.ಮೀ ಕಾಲುದಾರಿಯಲ್ಲಿ ಪ್ರಯಾಣಿಸಬೇಕು. ಬಹಳ ಇಕ್ಕಟ್ಟಾದ ಕಾಡಿನ ದಾರಿಯಲ್ಲಿ ಸಾಗುವಾಗ ಸುಸ್ತಾಗುತ್ತದೆ. ಹೀಗೆ ಸಾಗುವಾಗ ತಂಪು ಗಾಳಿಯ ಅನುಭವ ಹಿತ ನೀಡುತ್ತದೆ. ಮುಂದೆ ಸಾಗಿದರೆ ನಮಗೆ ಮೋಹಿನಿ ಶಿಖರ ಎದುರಾಗುತ್ತದೆ. ಇದು ಸುಮಾರು ೩೦೦ಅಡಿ ಎತ್ತರವಿದೆ. ಈ ಶಿಖರವನ್ನು ನೋಡುತ್ತಾ ಮುಂದುವರಿದರೆ ಮೈ ರೋಮಾಂಚನಗೊಳಿಸುವ ೩೯೦ ಅಡಿ ಎತ್ತರದ ಭೈರವೇಶ್ವರ ಶಿಖರ ಕಾಣುತ್ತದೆ. ಈ ಶಿಖರ ಕಪ್ಪುಕಲ್ಲಿನ ಉಕ್ಕಿನ ಕೋಟೆಯಂತಿದೆ. ಪ್ರಕೃತಿ ಮಾತೆಯೆ ಶಿಲ್ಪಿಯ ರೂಪು ತಾಳಿ ಇಲ್ಲಿನ ಆಕೃತಿಗಳನ್ನು ಕೆತ್ತಿದಳೆ? ಎಂಬಷ್ಟರ ಮಟ್ಟಿಗೆ ಆ ದೃಶ್ಯಗಳು ನೋಡುಗರನ್ನು ಚಕಿತಗೊಳಿಸುತ್ತವೆ.

ಯಾಣದ ಕುರಿತಾದ ಒಂದು ದಂತಕಥೆಯಿದೆ. ಪುರಾಣ ಕಾಲದಲ್ಲಿ ಯಾಣದಲ್ಲಿ ಭಸ್ಮಾಸುರನೆಂಬ ರಾಕ್ಷಸ ವಾಸವಾಗಿದ್ದ. ಈತನ ಉಪಟಳ ಸಹಿಸಲು ಅಸಾಧ್ಯವಾದಾಗ ಶಿವನು ಆತನನ್ನು ಸುಟ್ಟು ಬೂದಿ ಮಾಡಿದ. ಈ ಬೂದಿಯಿಂದ ದೊಡ್ಡದಾದ ಶಿಖರ ಬೆಳೆಯಿತು ಎಂಬುದೇ ಆ ದಂತಕಥೆ. ಆದರೆ ಭೂಗರ್ಭ ಶಾಸ್ತ್ರದ ಸಂಶೋಧನೆ ಪ್ರಕಾರ ಅತಿ ಹೆಚ್ಚು ಖನಿಜ ಸಂಪತ್ತಿನಿಂದ, ಸುಣ್ಣದ ಕಲ್ಲಿನಿಂದ ಕೂಡಿದ ಜಾಗ ಇದಾಗಿದೆ. ಇಲ್ಲಿನ ಕಲ್ಲಿನ ಗುಹೆಯೊಳಗೆ ಪ್ರವೇಶಿಸುವುದು ಒಂದು ಸುಂದರ ಅನುಭವ.

ಯಾಣ ಕುಮಟ ತಾಲ್ಲೂಕಿಗೆ ಹೊಂದಿಕೊಂಡಿದ್ದು ಅಲ್ಲಿಂದ ೨೫ ಕಿ.ಮೀ. ದೂರದಲ್ಲಿದೆ. ಅಲ್ಲಿ ಶಿವರಾತ್ರಿಯ ದಿನ ಭೈರವೇಶ್ವರ ಸ್ವಾಮಿಯ ಉತ್ಸವ ನಡೆಯುತ್ತದೆ. ಯಾಣದ ಬಗ್ಗೆ ಕೇಳುವುದಕ್ಕಿಂತ ನೋಡಿ ಅನುಭವಿಸುವುದೇ ಚಂದ. ನಮ್ಮನ್ನು ಯಾಣ ಪ್ರವಾಸಕ್ಕೆ ಕರೆದುಕೊಂಡು ಹೋಗುವಂತೆ ಪದ್ಮಿನಿ ಮೇಡಂ ಅವರಲ್ಲಿ ಕೇಳಿಕೊಳ್ಳೋಣ. ಅಲ್ಲವೇ?

–ನಿನ್ನ ಗೆಳೆಯ

ರಾಜು.







ಮಕ್ಕಳು ಸಿದ್ಧಪಡಿಸಿದ ವಿಶೇಷ ಪತ್ರವನ್ನು ನೋಡಿ ಶಿಕ್ಷಕರಿಗೆ ಸಂತೋಷವಾಯಿತು. ಪದ್ಮಿನಿ ಟೀಚರ್ ಮಕ್ಕಳಿಗೆ ಶಹಬ್ಬಾಸ್ ಹೇಳಿದರು. ಹಾಗೂ ಇತರ ಮಕ್ಕಳಿಗೆ ಇ–ಮೇಲ್' ಪತ್ರದ ಬಗ್ಗೆ, ಅದರ ಆವಶ್ಯಕತೆಯ ಬಗ್ಗೆ ತಿಳಿಸಿದರು. ಯಾಣಕ್ಕೆ ಪ್ರವಾಸ ಹೋಗೋಣ ಎಂದರು. ಮಕ್ಕಳಿಗೆಲ್ಲ ಸಂತೋಷವಾಯಿತು.

ಕ್ಷೇತ್ರ : ಬರೆಯುವುದು

ಸಾಮರ್ಥ್ಯ : ವಿವಿಧ ನಮೂನೆಯ ಉಭಯ ಕುಶಲೋಪರಿ ಪತ್ರ ಮತ್ತು ಪ್ರವಾಸ ಲೇಖನಗಳನ್ನು ಬರೆಯುವುದು

**ಆಶಯ :**

ನಮ್ಮ ಕನ್ನಡ ನಾಡು ಪ್ರಾಕೃತಿಕ ಸೊಬಗಿನಿಂದ ಕೂಡಿದ ಸುಂದರ ನಾಡು. ಕನ್ನಡ ನಾಡಿನ ಯಾವ ಭಾಗಕ್ಕೆ ಹೋದರೂ ಅಲ್ಲಿ ಪ್ರೇಕ್ಷಣೀಯ ಸ್ಥಳಗಳು ಅನೇಕ. ಅವುಗಳ ಪರಿಚಯ ನಮ್ಮ ವಿದ್ಯಾರ್ಥಿಗಳಿಗೆ ಆಗಬೇಕಾಗಿರುವುದು ಬಹು ಮುಖ್ಯ. ಇಲ್ಲಿ ಚಾರಣಕ್ಕೆ ಪ್ರಸಿದ್ಧವಾದ ಯಾಣದ ಸಂಕ್ಷಿಪ್ತ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ. ಇದರೊಂದಿಗೆ ಮಕ್ಕಳಿಗೆ 'ಇ-ಅಂಚೆ' ರಚಿಸುವ ಬಗ್ಗೆ ಮಾಹಿತಿ ನೀಡುವುದು ಈ ಪಾಠದ ಆಶಯ.

## ಅರ್ಥ ತಿಳಿಯಿರಿ :

ಸಂದೇಶ– ಸುದ್ದಿ; ನಿರೂಪ. ವಿನಿಮಯ–ಒಂದಕ್ಕೆ ಬದಲಾಗಿ ಮತ್ತೊಂದನ್ನು ಕೊಡುವಿಕೆ; ಅದಲು ಬದಲು ಮಾಡಿಕೊಳ್ಳು. ಚೂಟಿ–ಚುರುಕು; ಲವಲವಿಕೆ. ವಿಶೇಷ– ಪ್ರತ್ಯೇಕವಾದ; ವಿಶಿಷ್ಟವಾದ. ಗಗನಚುಂಬಿ– ಆಕಾಶವನ್ನು ಮುಟ್ಟುವಂತಹದು; ಬಹಳ ಎತ್ತರವಾದುದು. ಹೆಬ್ಬಂಡೆ–ದೊಡ್ಡದಾದ ಕಲ್ಲು. ಇಕ್ಕಟ್ಟು–ಸಂದಿಗ್ಧ; ಕಿರಿದಾದ. ಶಿಖರ– ಮರ, ಬೆಟ್ಟಗಳ ತುದಿ; ದೇವಾಲಯಗಳ ಗೋಪುರ. ಉತ್ಪತ್ತಿ– ಸೃಷ್ಟಿ; ಉಂಟಾಗು; ಹುಟ್ಟು.



## ವಿವರ ತಿಳಿಯಿರಿ :

ಕಂಪ್ಯೂಟರ್ :– ಇದನ್ನು ಸಂಗಣಕವೆಂದೂ ಗಣಕಯಂತ್ರವೆಂದೂ ಕರೆಯುತ್ತಾರೆ.

ಭೂಗರ್ಭ ಶಾಸ್ತ್ರ :– ಭೂಮಿಯ ಪದರಗಳ ಮತ್ತು ಭೂಮಿಯ ಒಳಗಿರುವ ವಸ್ತುಗಳ ವಿಷಯವನ್ನು ಅಧ್ಯಯನ ಮಾಡುವ ಶಾಸ್ತ್ರ.

ಗುಪ್ತ ಸಂಕೇತ–'ಇ–ಮೇಲ್' ಬಳಸುವ ಪ್ರತಿಯೊಬ್ಬರಿಗು ಅವರದ್ದೇ ಆದ ಗುಪ್ತ ಸಂಕೇತವಿರುತ್ತದೆ. ಅದನ್ನು ಬಳಸಿದಾಗ ಮಾತ್ರ ಅವರವರ 'ಇ–ಪತ್ರ' (ಅಂಚೆ) ತೆರೆದುಕೊಳ್ಳುವುದು. ಗುಪ್ತ ಸಂಕೇತವನ್ನು 'ಪಾಸ್‌ವರ್ಡ್' ಎಂದು ಕರೆಯುತ್ತಾರೆ.

ಚಾರಣ :– ಗುಡ್ಡ ಬೆಟ್ಟಗಳ ಕಡೆಗೆ ಸಾಹಸದ ನಡಿಗೆ.

ದಂತ ಕಥೆ– ಬಾಯಿಯಿಂದ ಬಾಯಿಗೆ ಹರಡುವ ಕಲ್ಪಿತ ಕಥೆ.

